# ಮರಣಾದ ನಂತರ ಜೀವನ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ಮರಣದ ನಂತರ ಜೀವನ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 50/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ತಾಯಿ ತಂದೆ.
27. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಹೇತುವಾದ ಪ್ರಶ್ನೆಗಳು- ಸತ್ಯವಾದ ಉತ್ತರಗಳು
86. ಮೂರು ದೈವಗ್ರಂಥಗಳು-ಮೂರು ಪ್ರಥಮ ವಾಕ್ಯಗಳು



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ಗ್ರಂಥಮುಲೊ–ಪ್ರಥಮ ವಾಕ್ಯಮುಲು
117. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ)

ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ

ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ,

ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ,

(ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ

(ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆನ್ಟ್ ರೋಡ್, ಚಾಮರಾಜ

ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ–38,

ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್,

ವೈಟ್ ಫೀಲ್ಡ್ ರೋಡ್,

ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಮರಣದ ನಂತರ ಜೀವನ



'ಮರಣ' ಎಂಬ ಮಾತನ್ನು ಕೇಳುವುದಕ್ಕೂ ಸಹ ಕೆಲವರು ಇಷ್ಟಪಡುವುದಿಲ್ಲ. ಮರಣವೆಂದರೆ ಅವರಿಗೆ ಎಷ್ಟೋ ಭಯವಿರುವುದರಿಂದ ಅವರು ಆ ಮಾತನ್ನು ಕೇಳುವುದಕ್ಕೂ ಸಹ ಇಷ್ಟಪಡುವುದಿಲ್ಲ. ಯಾವ ಪ್ರಾಣಿಗಾದರೂ ಜೀವನವನ್ನು ಮುಗಿಸುವುದು ಮರಣ. ಪ್ರತಿ ಮನುಷ್ಯನಿಗೂ ತನ್ನ ಜೀವನದಲ್ಲಿ ಯಾವಾಗಲೋ ಒಂದುಬಾರಿ ಮರಣವಿದ್ದರೂ ಅದನ್ನು ಮರೆತುಹೋಗಿ ಬದುಕುತ್ತಿದ್ದಾರೆ. ಆದರೆ ಅವನಿಗೆ ತಿಳಿಯದಂತೆಯೇ 'ಮರಣ' ಮನುಷ್ಯನ ಜೀವನವನ್ನು ಕೊನೆಯದಾಗಿ ಮಾಡುತ್ತದೆ. ಮನುಷ್ಯ ಜೀವನದಲ್ಲಿ ಒಂದು **ಕಾಲಾವಧಿ** ಮೊದಲೇ ನಿರ್ಣಯಿಸಲಾಗಿರುತ್ತದೆ. ಆ ಕಾಲಾವಧಿಯನ್ನೇ **ಮರಣ** ಎನ್ನುತ್ತಿದ್ದೇವೆ. ಮರಣ ಹುಟ್ಟಿದ ಪ್ರತಿ ಜೀವರಾಶಿಗೂ ಮರಣವಿದೆ. ದೇವರ ಕಾನೂನಿನ ಪ್ರಕಾರ ಎಂದರೆ ದೇವರ ಧರ್ಮದ ಪ್ರಕಾರ ಮರಣ ಎಲ್ಲರಿಗೂ ಸಮಾನವಾದದ್ದೇ. ಒಬ್ಬ ಮನುಷ್ಯ ಹೇಗೆ ಮರಣಿಸುತ್ತಿದ್ದಾನೊ ಹಾಗೆಯೇ ಪ್ರತಿ ಮನುಷ್ಯ ಮರಣಿಸಬೇಕಾಗಿದೆ. ಯಾರು ಹೇಗೆ ಸತ್ತರೂ, ಯಾವಾಗ ಸತ್ತರೂ, ಎಂತಹ ಪರಿಸ್ಥಿತಿಯಲ್ಲಿ ಸತ್ತುಹೋದರೂ ಮರಣದಲ್ಲಿ ಒಂದೇ ವಿಧಾನವಾದ ಅನುಭವವನ್ನೇ ಪ್ರತಿ ಮನುಷ್ಯ ಹೊಂದುವನು. ಆದ್ದರಿಂದ ಮರಣ ಎಲ್ಲರಿಗೂ ಸಮಾನವಾದದ್ದೆಂದು ಹೇಳಬಹುದು. ಮರಣವನ್ನು ಕನ್ನಡ ಭಾಷೆಯಲ್ಲಿ 'ಸಾವು' ಎಂದರೂ 'ಮೃತ್ಯು' ಎಂದರೂ ಅದು ಮರಣವೇ ಎಂದು ಎಲ್ಲರಿಗೂ ತಿಳಿದಿದೆ. ಮರಣ ಎನ್ನುವುದು ಒಂದೇ ಆದರೂ ಅದು ನಾಲ್ಕು ವಿಧಗಳಾಗಿವೆ. ಅವುಗಳ ಕುರಿತು ವಿವರವಾಗಿ ಹೇಳಿಕೊಂಡರೆ ಹೀಗೆ ಇದೆ.

ಮರಣ ಪ್ರತಿ ಮನುಷ್ಯನಿಗೂ ಒಂದೇ ಆದರೂ ಮರಣದ ನಂತರ ಇರುವ ಜೀವನವನ್ನು ಅನುಸರಿಸಿ ಮರಣ ನಾಲ್ಕು ವಿಧಗಳಾಗಿ ಹೇಳಲಾಗುತ್ತದೆ. ನಾಲ್ಕು ವಿಧಗಳ ಮರಣಗಳನ್ನು ಕುರಿತು ನಮ್ಮ ರಚನೆಗಳಲ್ಲಿ **"ಮರಣ ರಹಸ್ಯ"** ಎಂಬ ಗ್ರಂಥದಲ್ಲಿ ವಿವರವಾಗಿ ಹೇಳಲಾಗಿದೆ. ಆದರೂ ಈಗ ಅದನ್ನು ಕುರಿತು ಸ್ವಲ್ಪ ಹೇಳಿಕೊಳ್ಳೋಣ. ಮರಣದ ನಂತರ ಇರುವ ಜೀವಿಯ ಸ್ಥಿತಿಯನ್ನು

ಅನುಸರಿಸಿ ಮನುಷ್ಯನೊಂದರ ಮರಣಗಳನ್ನು ನಿರ್ಣಯಿಸಬಹುದು. ಅದರ ಪ್ರಕಾರ ಮನುಷ್ಯನ ಮರಣಗಳು ಒಟ್ಟು ನಾಲ್ಕು ವಿಧಗಳಾಗಿ ಇವೆ. **ಒಂದು ಕಾಲ ಮರಣ, ಎರಡು ಅಕಾಲ ಮರಣ, ಮೂರು ತಾತ್ಕಾಲಿಕ ಮರಣ, ನಾಲ್ಕು ಅಂತಿಮ ಮರಣ.** ಇದರಲ್ಲಿ ನಾಲ್ಕನೆಯ ಅಂತಿಮ ಮರಣ ಅಪರೂಪ ವಾಗಿರುವುದು, ಆದ್ದರಿಂದ ಅದನ್ನು ಬಿಟ್ಟರೆ ಮನುಷ್ಯ ಹೊಂದುವ ಮರಣಗಳು ಮೂರೇ ಎಂದು ಹೇಳಬಹುದು. ಮನುಷ್ಯನಿಗೆ ಅನೇಕ ಜೀವನಗಳಲ್ಲಿ ಅನೇಕ ಬಾರಿ ಮೂರು ವಿಧಗಳ ಮರಣಗಳು ಸಂಭವಿಸುತ್ತಿರಬಹುದು. ಈ ಮೂರು ಮರಣಗಳ ಹಿಂದೆ ಮನುಷ್ಯ ಜೀವನ ಬೇರೆ ಬೇರೆ ವಿಧಗಳಾಗಿ ಇರುವುದರಿಂದ ಮನುಷ್ಯ ಅನುಭವ ಮೂಲಕ ಗ್ರಹಿಸಬಹುದು. ನಾಲ್ಕನೆಯ ಮರಣವಾದ ಅಂತಿಮ ಮರಣದಲ್ಲಿ ಮಾತ್ರ ಜೀವಿಗೆ ಯಾವ ಅನುಭವವು ಇರುವುದಿಲ್ಲ. ಒಂದು ವಿಧವಾಗಿ ಅದು ಪ್ರತ್ಯೇಕವಾದ ಸ್ಥಿತಿಯೆಂದು ಹೇಳಬಹುದು. ಮರಣ ನಾಲ್ಕು ವಿಧಗಳಾಗಿ ಇದೆಯೆಂದು ಹೇಳುವುದು, ಇಲ್ಲಿಯವರೆಗು ಯಾರೂ ಹೇಳದ ವಿಷಯವಾಗಿರುವುದರಿಂದ, ಇದು ಎಲ್ಲರಲ್ಲಿ ಸಂಶಯಗಳನ್ನು ಹೆಚ್ಚಿಸುವಂತದ್ದಾಗಿದೆ. ಮರಣ ಎಲ್ಲರ ಅನುಭವದಲ್ಲಿ ಇದ್ದರೂ ಇದು ಯಾರಿಗೂ ಅರ್ಥವಾಗದ ವಿಷಯವಾಗಿರುವುದರಿಂದ, ಮರಣದ ನಂತರ ಯಾರಿಗೂ ಜ್ಞಾಪಕವಿರದೆ ಹೋಗಿರುವುದರಿಂದ, ಈ ವಿಷಯ ಹಳೆಯದಾದರೂ ಎಲ್ಲರಿಗೂ ಹೊಸದಾಗಿಯೇ ಇರುತ್ತದೆ. ಆದ್ದರಿಂದ ಈ ವಿಷಯವನ್ನೆಲ್ಲಾ ಎಷ್ಟೋ ವಿಧಗಳ ಪ್ರಶ್ನೆಗಳನ್ನು ಕೂಡಿಸಿ ತಿಳಿಯಬೇಕಾದ ಅವಶ್ಯವಿದೆ. ಇಲ್ಲಿ ಪ್ರಶ್ನೆ ನಮ್ಮದೇ, ಉತ್ತರ ನಮ್ಮದೇ, ಕೇಳುವ ಲಾಭ ನಿಮ್ಮದೇ! ಆದ್ದರಿಂದ ಎಷ್ಟೋ ಹೊಸ ವಿಷಯವನ್ನು ಹೊಂದುವ ಲಾಭವನ್ನು ಯಾರೂ ಬಿಟ್ಟುಕೊಳ್ಳಬಾರದೆಂದು ಹೇಳುತ್ತಿದ್ದೇವೆ. ಪ್ರಶ್ನೆ ನಮ್ಮದೇ, ಉತ್ತರ ನಮ್ಮದೇ ಆದರೂ, ಅದನ್ನು ಗ್ರಹಿಸುವ ಲಾಭ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಇರಬಹುದು. ಕಡಿಮೆ ಲಾಭವನ್ನು ಹೊಂದದೆ ಹೆಚ್ಚು ಲಾಭವನ್ನೇ ಹೊಂದಬೇಕೆಂದು ಕೋರುತ್ತಿದ್ದೇವೆ.

**ಪ್ರಶ್ನೆ :– ಈಗಿರುವ ಮೂರು ಮತಗಳಲ್ಲಿ ಎರಡು ಮತದವರು ಮನುಷ್ಯ ಒಂದು ಬಾರಿಯೇ ಮರಣಿಸುವನೆಂದು, ಒಂದೇ ಮರಣ ಇದೆಯೆಂದು ಹೇಳುತ್ತಿರುವಾಗ**

**ನೀವು ನಾಲ್ಕು ವಿಧಗಳ ಮರಣಗಳಿವೆಯೆಂದು ಹೇಳುತ್ತಿದ್ದೀರಾ. ನಿಮ್ಮ ಮಾತಿಗೆ ಶಾಸ್ತ್ರಬದ್ಧತೆ ಇದೆಯಾ?**

**ಉತ್ತರ :–** ಶಾಸ್ತ್ರಬದ್ಧತೆ ಇಲ್ಲದ ವಿಷಯವನ್ನು ನಾವು ಎಂದಿಗೂ ಹೇಳುವುದಿಲ್ಲ. ಆದರೆ ಮನುಷ್ಯ ಒಂದೇ ಬಾರಿ ಹುಟ್ಟಿ ಒಂದೇ ಬಾರಿ ಸತ್ತುಹೋಗುವನೆಂದೂ, ನಂತರ ಆತನಿಗೆ ಜನ್ಮ ಇಲ್ಲವೆಂದೂ, ಹಾಗೆಯೇ ಮರಣ ಇಲ್ಲವೆಂದೂ ಹೇಳುವ ಅವರ ಮಾತುಗಳಿಗೆ ಶಾಸ್ತ್ರಬದ್ಧತೆ ಇದೆಯಾ? ಎಂದು ನಾನು ಕೇಳುತ್ತಿದ್ದೇನೆ. ದೈವಗ್ರಂಥಗಳಲ್ಲಿ ಕರ್ಮ ಇದೆಯೆಂದು ಹೇಳಿದ್ದಾರೆ, ಕರ್ಮದ ಪ್ರಕಾರ ಜನ್ಮಗಳಿವೆಯೆಂದು ಸಹ ಹೇಳಿದ್ದಾರೆ. ಈ ವಿಷಯ ಮೂರು ದೈವಗ್ರಂಥಗಳಲ್ಲಿವೆ. ಹಾಗಿರುವಾಗ ಎಲ್ಲ ಮತದವರು ಒಂದೇ ಮನುಷ್ಯ ಜಾತಿಯಾಗಿ ಇರುವಾಗ, ಒಂದು ಮತದಲ್ಲಿ ಜನ್ಮಗಳಿರುವುದು ಮತ್ತೊಂದು ಮತದಲ್ಲಿ ಜನ್ಮಗಳು ಇಲ್ಲದೆ ಹೋಗುವುದಂತೂ ಏನೂ ಇರುವುದಿಲ್ಲ. **'ಪ್ರತಿ ಜೀವಿಗೂ ಹುಟ್ಟು ಇದೆ, ಸಾವು ಇದೆ. ಸತ್ತುಹೋದ ನಂತರ ತಕ್ಷಣವೇ ಮತ್ತೆ ಜನ್ಮವಿದೆ. ಇದು ಶಾಸ್ತ್ರಬದ್ಧವಾದ ವಿಷಯ.'** ಗ್ರಂಥದಲ್ಲಿ ಹೇಳಿರುವುದು ಹೇಳಿದಂತೆ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ನಡೆಯುತ್ತಿದೆ. ಪ್ರತ್ಯಕ್ಷವಾಗಿ ನಡೆಯುವುದು ಸತ್ಯವಾಗಿರುವುದೆಂದು ಎಲ್ಲರೂ ಒಪ್ಪಿಕೊಳ್ಳದೇ ತಪ್ಪುವುದಿಲ್ಲ. **ಯಾವುದು ಸತ್ಯ ಸಮೇತವಾಗಿರುವುದೋ ಅದೇ ಶಾಸ್ತ್ರವಾಗುತ್ತದೆ.** ಯಾವುದು ಶಾಸ್ತ್ರವಾಗಿದೆಯೋ ಅದೇ ನಡೆದು ತೀರುತ್ತದೆ. ಯಾವುದು ನಡೆಯುತ್ತಿದೆಯೋ ಅದನ್ನು ಅಲ್ಲ ಎನ್ನುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಶಾಸ್ತ್ರವನ್ನು ಯಾರೂ ಅಲ್ಲ ಎನ್ನಲಾರರು.

**ಪ್ರಶ್ನೆ :– ನಿಲ್ಲಿರಿ! ನಮ್ಮ ಮಾತಿಗೆ ನೇರವಾಗಿ ಸಮಾಧಾನವನ್ನು ಹೇಳಿರಿ. ಮೂರು ದೈವಗ್ರಂಥಗಳಲ್ಲಿ ಒಂದರಲ್ಲಾದರೂ ನೀವು ಹೇಳುವ ತಾತ್ಕಾಲಿಕ ಮರಣದ ಹೆಸರು ಇದೆಯಾ? ಅಕಾಲ ಮರಣದ ಹೆಸರಿದೆಯಾ? ಎಲ್ಲಿಯೂ ಅವುಗಳ ಹೆಸರೇ ಇಲ್ಲದಿರುವಾಗ ನೀವು ದೈವಗ್ರಂಥದಲ್ಲಿರುವ ವಿಷಯಗಳೇ ಎಂದು, ಶಾಸ್ತ್ರಬದ್ಧವಾದ ವಿಷಯಗಳೇ ಎಂದು ಹೇಗೆ ಹೇಳುತ್ತೀರಾ? ಮೂರು ದೈವ ಗ್ರಂಥಗಳು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವೇ ಎಂದು ನೀವೇ ಹೇಳಿದ್ದೀರ. ಆದರೆ ಅವುಗಳಲ್ಲಿ**

**ಇಲ್ಲದ ವಿಷಯವನ್ನು ನೀವು ಶಾಸ್ತ್ರ ವಿಷಯವೆನ್ನುತ್ತಿದ್ದೀರಿ. ಹಾಗಿರುವಾಗ ನಿಮ್ಮ ಮಾತು ಅಸತ್ಯ ಅಲ್ಲವೇ? ಅಸತ್ಯವನ್ನು ಹೇಳುತ್ತಾ ನೀವು ಮಾತುಗಳ ಚಾಕಚಕ್ಯದಿಂದ ಅವುಗಳನ್ನೇ ಶಾಸ್ತ್ರಬದ್ಧತೆ ಇರುವ ವಿಷಯಗಳೆಂದು ಹೇಳುವುದು ತಪ್ಪಲ್ಲವೆ! ಎಂದು ಕೇಳುತ್ತಿದ್ದೇವೆ.**

**ಉತ್ತರ :–** ಅಸತ್ಯವನ್ನು ಸತ್ಯವಾಗಿ ನಾವು ಹೇಳಲಿಲ್ಲ. ನಾನು ಮೊದಲೇ ಯಾವುದು ಶಾಸ್ತ್ರವೋ ಅದೇ ಸತ್ಯವೆಂದು, ಯಾವುದು ಸತ್ಯವೋ ಅದೇ ಶಾಸ್ತ್ರವೆಂದು ಹೇಳಿದ್ದೇನೆ. ಹಾಗಿರುವಾಗ ಅಸತ್ಯವನ್ನು ಶಾಸ್ತ್ರವೆಂದು ನಾನು ಹೇಗೆ ಹೇಳಬಲ್ಲೆನು. ಮೇಲಾಗಿ ಅಂತಹ ಅವಶ್ಯವೂ ನನಗೆ ಇಲ್ಲ. ಯಾವುದಾದರೂ ಲಾಭ ಉಪೇಕ್ಷಿಸುವವರು ಅಸತ್ಯವನ್ನು ಸತ್ಯವಾಗಿ ಹೇಳಬಹುದೇನೋ ಆದರೆ, ಯಾವ ಲಾಭವನ್ನು ಆಶಿಸದ ನನಗೆ ಅಂತಹ ಅವಶ್ಯವೇ ಇಲ್ಲ. **ಸತ್ಯವನ್ನು ಸತ್ಯವಾಗಿ, ಅಸತ್ಯವನ್ನು ಅಸತ್ಯವಾಗಿ ಹೇಳುವುದು ನನ್ನ ಕರ್ತವ್ಯ.** ಆದ್ದರಿಂದ ಶಾಸ್ತ್ರವಲ್ಲದ್ದನ್ನು ಅಶಾಸ್ತ್ರೀಯವೆಂದು ಹೇಳುತ್ತಿದ್ದೇವೆ. ನಾವು ಹೇಳುವುದು ಶಾಸ್ತ್ರೀಯವೇ ಆಗಿರುವಾಗ, ಸತ್ಯವೇ ಆಗಿರುವಾಗ ಶಾಸ್ತ್ರಗಳಾದ ಮೂರು ದೈವಗ್ರಂಥಗಳಲ್ಲಿ ಇಲ್ಲವೆಂದು ನೀವೆನ್ನುತ್ತಿದ್ದೀರ. ವಾಸ್ತವವೇ! ನಾವು ಹೇಳಿದ ಹೆಸರುಗಳು ಮೂರು ಗ್ರಂಥಗಳಲ್ಲಿ ಎಲ್ಲಿಯೂ ಪ್ರಸ್ತಾವನೆಗೆ ಬರಲಿಲ್ಲವೆಂದು ನಾನೂ ಸಹ ಹೇಳುತ್ತಿದ್ದೇನೆ. ಆದರೂ ನನ್ನ ಮಾತು ಶಾಸ್ತ್ರವೆಂದು ಹೇಳುವುದಕ್ಕೆ ಮೂರು ಗ್ರಂಥಗಳಲ್ಲಿನ ವಿಷಯವೇ ಎಂದು ಹೇಳುವುದಕ್ಕೆ ಆಧಾರವಿದೆ. ಮುಖ್ಯವಾಗಿ ನಾನು ಹೇಳುವ ಮಾತು ಶಾಸ್ತ್ರವಲ್ಲವೆಂದು ಹೇಳುವುದಕ್ಕೆ ಯಾರಿಗೂ ಅವಕಾಶವಿಲ್ಲ ಏಕೆಂದರೆ!

ಶಾಸ್ತ್ರ ವಿಷಯಗಳು ಎರಡು ವಿಧಗಳಾಗಿವೆ. ಮೊದಲದಾಗಿ ತಿಳಿಸಿರುವವು ಒಂದು ವಿಧವಾದರೆ, ಹೊಸದಾಗಿ ಪರಿಶೋಧನೆ ಮಾಡಿ ಕಂಡುಕೊಳ್ಳುವವು ಒಂದು ವಿಧ. ಭೂಮಿಗೆ ಆಕರ್ಷಣ ಶಕ್ತಿ ಇದೆಯೆಂದು ಸ್ವಲ್ಪ ಕಾಲದ ಹಿಂದೆ ತಿಳಿಯದು. ನಂತರ ಸ್ವಲ್ಪ ಕಾಲಕ್ಕೆ ನ್ಯೂಟನ್ ಎಂಬ ವ್ಯಕ್ತಿ ತನ್ನ ಪರಿಶೋಧನೆ ಮೂಲಕ ಕಂಡುಕೊಂಡ ವಿಷಯವನ್ನು ತಿಳಿಸಿದ್ದಾನೆ. ಭೂಮಿಗೆ ಆಕರ್ಷಣೆ

ಇದೆಯೆಂದು ನ್ಯೂಟನ್ ಪರಿಶೋಧನೆಯಿಂದ ತಿಳಿದಿದೆ. ಅದು ಶಾಸ್ತ್ರಬದ್ಧವಾದ ಸತ್ಯವಾದ ವಿಷಯವೇ ಆಗಿರುವುದರಿಂದ ಅದನ್ನು ಶಾಸ್ತ್ರ ಎನ್ನುತ್ತಿದ್ದೇವೆ. ಮೊದಲು ತಿಳಿಯದ ಶಾಸ್ತ್ರವನ್ನು ನಂತರ ಸಹ ತಿಳಿಯಬಹುದು. ಈ ವಿಧವಾಗಿ ಆದಿಯಿಂದ ಎಷ್ಟೋ ಶಾಸ್ತ್ರ ವಿಷಯಗಳು ಮುಂದೆ ಹಿಂದೆ ತಿಳಿಯಲಾಗುತ್ತಿವೆ. ಯಾವುದು ಏನಾದರೂ ಸತ್ಯ ಪ್ರಮಾಣವೇ ಶಾಸ್ತ್ರ ಪ್ರಮಾಣವಾಗುತ್ತಿದೆ. ಇದನ್ನನುಸರಿಸಿ ಶಾಸ್ತ್ರ ವಿಷಯಗಳೆಲ್ಲವೂ ಮೊದಲೇ ಹೇಳಲಾಗಲಿಲ್ಲವೆಂದು ಆಗಾಗ ಪರಿಶೋಧನೆಗಳ ಮೂಲಕ ಹೊರಗೆ ಬರುತ್ತಿರುತ್ತವೆಂದು ತಿಳಿಯುತ್ತಿದೆ. ಮರಣವನ್ನು, ಕೊನೆಯ ಮರಣವನ್ನು ಆದಿಯಲ್ಲಿನ ಭಗವದ್ಗೀತೆಯಲ್ಲೇ ಹೇಳಿದ್ದರೂ ಅಕಾಲ ಮರಣವನ್ನು, ತಾತ್ಕಾಲಿಕ ಮರಣವನ್ನು ಈಗ ನಾವು ವಿವರವಾಗಿ ಹೇಳುತ್ತಿದ್ದೇವೆ. ಇದರಲ್ಲಿ ಒಟ್ಟು ನಾಲ್ಕು ಮರಣಗಳು ಶಾಸ್ತ್ರಬದ್ಧವಾದವು. ಭಗವದ್ಗೀತೆಯಲ್ಲಿ ಕೇವಲ ಮರಣವನ್ನು ಕುರಿತು ನಂತರ ಜನ್ಮವನ್ನು ಕುರಿತು ಹೇಳುವುದೇ ಅಲ್ಲದೆ, ಕೊನೆಯ ಮರಣ ಇಲ್ಲವೆ ಅಂತಿಮ ಮರಣವನ್ನು ಕುರಿತು ಸಹ ಹೇಳುವುದಾಗಿದೆ. ಆದರೆ ಮರಣಕ್ಕೂ, ಅಂತಿಮ ಮರಣಕ್ಕೂ ಮೊದಲಿರುವ ಅಕಾಲ ಮರಣ, ತಾತ್ಕಾಲಿಕ ಮರಣವನ್ನು ಕುರಿತು ಹೇಳಿರಲಿಲ್ಲ. ಭಗವದ್ಗೀತೆಯಲ್ಲಿ ಆ ಸಮಯಕ್ಕೆ ಅವಶ್ಯವಾದ ಮುಖ್ಯವಾದ ಆಧ್ಯಾತ್ಮಿಕ ವಿಷಯಗಳೆಲ್ಲವೂ ಹೇಳಲಾಗಿವೆ. ನಿದ್ರೆ ಎಚ್ಚರವನ್ನು ಕುರಿತು ಹೇಳಿದವನು ಸ್ವಪ್ನವನ್ನು ಕುರಿತು ಹೇಳಲಿಲ್ಲ. ಹಾಗೆಯೇ ಮರಣ, ಅಂತಿಮ ಮರಣವನ್ನು ಕುರಿತು ಹೇಳಿದವನು ಉಳಿದ ತಾತ್ಕಾಲಿಕ ಮರಣವನ್ನು ಕುರಿತಾಗಲೀ, ಅಕಾಲ ಮರಣವನ್ನು ಕುರಿತಾಗಲೀ ಹೇಳಲಿಲ್ಲ. ನಂತರ ಆ ವಿಷಯಗಳನ್ನು ಮನುಷ್ಯರ ಮೆದಳಿಗೆ ತಿಳಿಸಿ ಮನುಷ್ಯರಿಂದಲೇ ಹೇಳಿಸಿದ್ದಾನೆ. ಆದ್ದರಿಂದ ನಂತರ ಹೇಳಲಾಗಿರುವ ಎರಡು ಮರಣಗಳು ಶಾಸ್ತ್ರಬದ್ಧವಾದವೇ ಎಂದು ಹೇಳಬಹುದು.

**ಪ್ರಶ್ನೆ :– ಆಧ್ಯಾತ್ಮಿಕ ಸಂಬಂಧ ವಿಷಯಗಳೆಲ್ಲವೂ ಭಗವದ್ಗೀತೆಯಲ್ಲಿ ಹೇಳಲಾಗಿವೆಯೆಂದು ನೀವು ಒಂದು ಸಮಯದಲ್ಲಿ ಹೇಳಿದ್ದೀರಿ. ನಂತರ ಈಗ ಅಲ್ಲಿ ಕೆಲವು**

**ವಿಷಯಗಳನ್ನು ಹೇಳಲಿಲ್ಲ. ಅವುಗಳನ್ನು ನಂತರ ತಿಳಿಯಲಾಗುತ್ತವೆ ಯೆಂದು ಹೇಳುತ್ತಿದ್ದೀರಿ. ನಿಮ್ಮ ಮಾತನ್ನು ನಂಬಬೇಕೆನ್ನುತ್ತೀರಾ?**

**ಉತ್ತರ :-** ನನ್ನ ಮಾತನ್ನು ನಂಬಿರೆಂದು ಹೇಳಿದಂತೆ ಎರಡನೆಯ ದೈವಗ್ರಂಥವಾದ ಅದರಲ್ಲಿ ಒಂದು ಮಾತನ್ನು ಹೇಳಲಾಗಿದೆ. ಅದು ಏನೆಂದರೆ! **"ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ. ಆದರೆ ನೀವು ಅವುಗಳನ್ನು ಈಗ ಸಹಿಸಲಾರರು. ಆದರೆ ಆತನು ಎಂದರೆ ಸತ್ಯಸ್ವರೂಪಿಯಾದ ಆತ್ಮ ಬಂದಾಗ ನಿಮ್ಮನ್ನು ಸರ್ವಸತ್ಯದೊಳಗೆ ನಡೆಸುವನು"** ಎಂದು ಇದೆ. ಇದನ್ನನುಸರಿಸಿ ಒಂದೇ ಬಾರಿ ಎಲ್ಲ ವಿಷಯಗಳು ತಿಳಿಯಲಿಲ್ಲ ನಂತರ ತಿಳಿದಿರುವವು ಸಹ ಶಾಸ್ತ್ರಸಂಬಂಧ ಸತ್ಯವಾದ ವಿಷಯಗಳೇ ಎಂದು ತಿಳಿಯುತ್ತದೆ. ಆದರೆ ಮೊದಲ ಗ್ರಂಥದಲ್ಲಿ ಒಂದು ವಿಷಯವನ್ನು ಅಸಂಪೂರ್ಣವಾಗಿ ತಿಳಿಸಿರುತ್ತಾನೆ. ಆ ವಿಷಯಕ್ಕೆ ಸಂಬಂಧಿಸಿದ ವಿವರ ನಂತರ ಕಾಲದಲ್ಲಿ ಸಂಪೂರ್ಣವಾಗಿ ತಿಳಿಯಲಾಗುತ್ತದೆ. ಭಗವದ್ಗೀತೆ ಗ್ರಂಥದಲ್ಲಿ ಆತ್ಮವನ್ನು ಕುರಿತು ಹೇಳಿದ್ದರೂ, ಅದರ ವಿವರಕ್ಕೆ ಸಂಬಂಧಿಸಿದ ಮಾತುಗಳು ಬೈಬಲ್‌ನಲ್ಲಿರುವ ನಾಲ್ಕು ಸುವಾರ್ತೆಗಳಲ್ಲಿ ಇವೆ. ಹಾಗೆಯೇ ಭಗವದ್ಗೀತೆಯಲ್ಲಿ ಸ್ವಲ್ಪ ಮಟ್ಟಿಗೆ ಹೇಳಿರುವ ವಿಷಯಗಳು ಕೆಲವು ಖುರಾನ್ ಗ್ರಂಥದಲ್ಲಿ ವಿವರಿಸಿ ಹೇಳುವುದು ನಡೆದಿದೆ. ಹಾಗೆಯೇ ಮರಣ ವಿಷಯವೂ ಸಹ ಮೊದಲು ಭಗವದ್ಗೀತೆಯಲ್ಲಿ ಸ್ವಲ್ಪ ಹೇಳಿದ್ದರೂ, ಈಗ ಸಂಪೂರ್ಣವಾಗಿ ತಿಳಿಯುತ್ತಿದೆ. ಮೊದಲು ಗೀತೆಯಲ್ಲಿ ಎಲ್ಲ ವಿಷಯಗಳಿದ್ದರೂ ಕೆಲವುಗಳಿಗೆ ಅವುಗಳ ವಿವರ ಇಲ್ಲ. ಆ ವಿವರವು ಎರಡನೆಯ ಬಾರಿ ತಿಳಿಯಲಾಗುತ್ತಿದೆ. ಹಾಗೆಯೇ ಮೊದಲು ಕೆಲವು ಸೂಚನೆಯಾಗಿ ಹೇಳಿದ ವಿಷಯಗಳು ನಂತರ ಬಂದಾಗ ಅವು ಪೂರ್ತಿ ಹೊಸದಾಗಿ ಕಾಣಿಸುತ್ತವೆ. ನಂತರ ತಿಳಿಯಲಾಗಿರುವವು ಹೊಸವೇ ಆದರೂ, ಅವುಗಳ ಮೂಲಗಳು ಭಗವದ್ಗೀತೆಯಲ್ಲಿ ಎಲ್ಲೋ ಒಂದು ಕಡೆ ಇರುತ್ತವೆ. ಉದಾಹರಣೆಗೆ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳು ಇಂದು ಸವಿವರವಾಗಿ ತಿಳಿಯಲಾಗಿವೆ. ಆದರೆ ಅವುಗಳನ್ನು ಕುರಿತು ಮೂರು ದೈವ

ಗ್ರಂಥಗಳಲ್ಲಿಯೂ ಎಲ್ಲೂ ಹೇಳಲಿಲ್ಲವೆಂದು ಕೆಲವರೆನ್ನಬಹುದು. ಆದರೆ ಮೊದಲ ದೈವಗ್ರಂಥವಾದ ಭಗವದ್ಗೀತೆಯಲ್ಲೇ ಅಕ್ಷರ ಪರಬ್ರಹ್ಮಯೋಗದಲ್ಲಿ ಅವುಗಳ ಮೂಲವಿದೆಯೆಂದು ನಾವು ಹೇಳಿದ್ದೇವೆ. **ಇಂದು ನಮಗೆ ತಿಳಿದ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳನ್ನು ಕುರಿತು ಪರೋಕ್ಷವಾಗಿ ದೇವರ ಮುದ್ರೆಯೆಂದು ಬೈಬಲ್ ಗ್ರಂಥದಲ್ಲಿಯೂ, ದೇವರ ಚಿಹ್ನ ಎಂದು ಖುರಾನ್ ಗ್ರಂಥದಲ್ಲಿಯೂ ಹೇಳಲಾಗಿದೆಯೆಂದು ಪ್ರಜೆಗಳು ಗ್ರಹಿಸಲಾಗದೆ ಹೋಗಿದ್ದಾರೆ.** ಆದ್ದರಿಂದ ಅಲ್ಲಿಲ್ಲದ ವಿಷಯಗಳು ನೀವು ಹೇಗೆ ಹೇಳುತ್ತಿದ್ದೀರೆಂದು ಕೆಲವರು ಕೇಳುತ್ತಿದ್ದಾರೆ. ಇರುವ ವಿಷಯವನ್ನೇ ಹೊಸದಾಗಿ ಹೇಳುತ್ತಿದ್ದೇವೆ. ಆದ್ದರಿಂದ ಅವು ನಮಗೆ ಹೊಸದಾಗಿ ಕಾಣಿಸಿರಬಹದು. ಒಂದು ಗ್ರಂಥದಲ್ಲಿರುವ ವಿಷಯ ಮತ್ತೊಂದು ಗ್ರಂಥದಲ್ಲಿ ಇಲ್ಲದೆ ಇರಬಹುದು. ಹಾಗೆಯೇ ಒಂದು ಗ್ರಂಥದಲ್ಲಿ ಇಲ್ಲದ ವಿಷಯ ಮತ್ತೊಂದು ಗ್ರಂಥದಲ್ಲಿ ಇರಬಹುದು. ಮೂರು ಗ್ರಂಥಗಳಲ್ಲಿ ಕಾಣಿಸದ ವಿಷಯವು ನಮ್ಮ ಗ್ರಂಥಗಳಲ್ಲಿ ಕಾಣಿಸಿರಬಹುದು. ಆದರೂ ನಾವು ಈಗ ಹೇಳಿದ ವಿಷಯಗಳಾಗಲೀ, ನಂತರ ದೈವಗ್ರಂಥಗಳಲ್ಲಿನ ವಿಷಯಗಳಾಗಲೀ, ಅವುಗಳ ಬುನಾದಿಗಳು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ತಪ್ಪದೆ ಇರುತ್ತವೆ. ಆದ್ದರಿಂದ ಆ ವಿಷಯವನ್ನು ಗುರುತಿಸಲಾರದವರಿಗೆ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥವು **"ನಾನು ತೌರಾತ್ (ಭಗವದ್ಗೀತೆ) ಗ್ರಂಥಲ್ಲಿನ ಜ್ಞಾನವನ್ನು ದೃಢೀಕರಿಸುತ್ತಿದ್ದೇನೆಂದು"** ತಿಳಿಸಿದೆ. ಇವೆಲ್ಲಾ ಗಮನಿಸಿದ ನಂತರ ಯಾವಾಗ ಹೇಳಿದರೂ ಶಾಸ್ತ್ರ ಶಾಸ್ತ್ರವೇ, ಸತ್ಯ ಸತ್ಯವೇ ಎಂದು ತಿಳಿಯಬೇಕು.

**ಪ್ರಶ್ನೆ :– ಮರಣ ಎಂದರೆ ಏನೂ?**

**ಉತ್ತರ :–** ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವೂ ನಿಂತು ಹೋಗುವುದನ್ನು ಮರಣ ಎನ್ನುತ್ತೇವೆ. ಈ ವಿಷಯವನ್ನು ಯಾರೂ ಅಲ್ಲ ಎನ್ನಲಾರರು. ಏಕೆಂದರೆ! ಮರಣ ಪ್ರತ್ಯಕ್ಷವಾಗಿ ನಡೆಯುವ ಸತ್ಯ. ಪ್ರತ್ಯಕ್ಷವಾಗಿ ನಡೆಯುವುದರಲ್ಲಿ ಶರೀರದಲ್ಲಿ ನಡೆಯುವ ಕೆಲಸಗಳೆಲ್ಲಾ ನಿಂತುಹೋಗುವುದು ಎಲ್ಲರಿಗೂ ತಿಳಿದ ವಿಷಯವೇ. ಮರಣವನ್ನು ಕುರಿತು ಇನ್ನೂ ಸ್ವಲ್ಪ ವಿವರವಾಗಿ ಹೇಳಿಕೊಳ್ಳುವುದಾದರೆ ಈ

ವಿಧವಾಗಿ ಅರ್ಥವಾಗುತ್ತದೆ. **'ಮರಣ'** ಎನ್ನುವ ಪದವನ್ನು ಪೂರ್ವದಲ್ಲಿ **'ಅರಣ'** ಎನ್ನುವ ಪದವಾಗಿ ಹೇಳುತ್ತಿದ್ದರು. ಕೃತಯುಗದಲ್ಲಿ ಅರಣ ಎನ್ನುವ ಪದವಾಗಿರುವ ಶಬ್ದ ಕಾಲಕ್ರಮದಲ್ಲಿ ಸ್ವಲ್ಪ ಬದಲಾವಣೆಯಾಗಿ ಹೇಳುವುದರಲ್ಲಿ ಮರಣವಾಗಿ ಹೇಳಲಾಗುತ್ತಿದೆ. ಅರಣ ಎನ್ನುವ ಮಾತನ್ನು ವರುಸೆಯಾಗಿ ಕೆಲವು ಬಾರಿ ಉಚ್ಚರಣೆ ಮಾಡಿದರೆ ನಾವು ಹೇಳುವುದರಲ್ಲಿ ಸಹ 'ಅ' ಎಂಬ ಅಕ್ಷರ ಹೋಗಿ 'ಮ' ಎಂಬ ಶಬ್ದ ಬರುತ್ತಿದೆ. ಈ ವಿಧವಾಗಿ 'ಅರಣ' ಎನ್ನುವ ಪದ 'ಮರಣ' ಎನ್ನುವ ಪದವಾಗಿ ಬದಲಾಗಿದೆ. ಈ ದಿನ ಹಿಂತಿರುಗಿ ನೋಡದಂತೆ ಎಲ್ಲರೂ ಮರಣ ಎನ್ನುವ ಶಬ್ದವನ್ನೇ ಬಳಸುತ್ತಿದ್ದಾರೆ. ಮರಣ ಎನ್ನುವ ಅರ್ಥವನ್ನು ಕೊಡುವ 'ಸಾವು' ಎಂಬ ಪದವೂ ಸಹ ಇದೆ. 'ಸಾಯುವುದು' ಎಂಬ ಪದವನ್ನು 'ಸಾವು' ಎಂಬ ಪದವಾಗಿ ಸಹ ಹೇಳಬಹುದು. ಸಾಯುವುದು ಅಥವಾ ಸತ್ತುಹೋಗುವುದು ಎಂದರೂ, ಸಾವು ಎಂದರೂ ಎರಡೂ ಒಂದೇ ಅರ್ಥವನ್ನು ಕೊಡುತ್ತಿವೆ. ವಾಸ್ತವವಾಗಿ 'ಅರಣ' ಎಂಬ ಪದವು 'ಮರಣ' ಎಂಬ ಪದವಾಗಿ ಬದಲಾಗಿದೆ. ಶರೀರದಲ್ಲಿನ ಶಕ್ತಿಯನ್ನು ಸತ್ತು, ಸತ್ತುವ ಎಂದು ಕರೆಯುತ್ತಿರುತ್ತಾರೆ. 'ಸತ್ತು' ಎಂದರೆ 'ಆತ್ಮ' ಎಂದು ಅರ್ಥ. ಸತ್ತು ಹೋಗುವುದು ಎಂದರೆ ಶರೀರದಲ್ಲಿ ಆತ್ಮಶಕ್ತಿ ಶರೀರವನ್ನು ಬಿಟ್ಟುಹೋಗಿದೆಯೆಂದು ಅರ್ಥ. ಆದರೆ ಇಂದಿನ ಕಾಲದಲ್ಲಿ ಅದರ ಅರ್ಥ ತಿಳಿಯದಂತಾಗಿದೆ. ಅದೇ ವಿಧವಾಗಿ 'ಅರಣ' ಎಂಬ ಪದ 'ಮರಣ' ಎಂಬ ಪದವಾಗಿ ಬದಲಾಗಿದೆ.

ಮರಣ ಎಂಬ ಪದಕ್ಕೆ ಒಂದು ಅರ್ಥ ಇದೆ. ಮರಣ ಎಂಬ ಪದ ಅರಣವಾಗಿ ಇರುವಾಗಲೇ ಅದಕ್ಕೆ ಒಂದು ಅರ್ಥ, ಸ್ವಲ್ಪ ವಿವರ ಇರುತ್ತಿತ್ತು. ಅರಣ ಎಂಬ ಪದವನ್ನು ಪೂರ್ವವು ಜ್ಞಾನಿಗಳಾದ ಹಿರಿಯರು ಎರಡಾಗಿ ವಿಭಜಿಸಿದ್ದಾರೆ. ಅ+ರಣ=ಅರಣವಾಗಿ ಇರುತ್ತಿತ್ತು. ರಣ ಎಂದರೇ ಯುದ್ಧ ಎಂದು ಅರ್ಥ. ಯುದ್ಧದಲ್ಲಿ ಬಿಡುವಿಲ್ಲದೆ ಕದಲಾಡಬೇಕಾಗಿರುತ್ತದೆ. ಯುದ್ಧದಲ್ಲಿ ಕದಲದಂತೆ ನಿಂತರೇ ಶತ್ರುಗಳ ಕೈಯಲ್ಲಿ ಸಾವು ಖಂಡಿತ. ಯುದ್ಧದಲ್ಲಿರುವ

ಪ್ರತಿ ಮನುಷ್ಯ ತಪ್ಪದೆ ಚಲಿಸಿ ಯುದ್ಧ ಮಾಡಬೇಕಾಗಿರುತ್ತದೆ. ಆದ್ದರಿಂದ **'ಯುದ್ಧ'** ಎಂದರೆ 'ಕದಲಿಕೆ ಇರುವಂತದ್ದು' ಎಂದು ಅರ್ಥ ಸಹ ಇದೆ. ಯುದ್ಧರಂಗದಲ್ಲಿ ಒಂದು ಕ್ಷಣವೂ ಸಹ ನಿಲ್ಲದಂತೆ ಕದಲು (ಚಲಿಸು) ತ್ತಿರಬೇಕು. ಅದೇ ರೀತಿ ಒಂದು ಕ್ಷಣವೂ ನಿಲ್ಲದೇ ಆತ್ಮ ಶರೀರದಲ್ಲಿ ಕದಲಿಕೆಗಳನ್ನುಂಟು ಮಾಡುತ್ತಿದೆ. ಯುದ್ಧದಲ್ಲಿ ಎಷ್ಟೋ ವಿಧಗಳಲ್ಲಿ ಚಲಿಸಿದಹಾಗೆ, ಶರೀರದಲ್ಲಿ ಎಷ್ಟೋ ಚಲನೆಗಳಿಂದ ಮನುಷ್ಯ ಜೀವಿಸುತ್ತಿದ್ದಾನೆ. ರಣ ಎಂದರೆ ಚಲನೆ ಇರುವುದೆಂದು ಅರ್ಥ. ಅರಣ ಎಂದರೆ ಚಲನೆ ಇಲ್ಲದಿರುವುದೆಂದು ಅರ್ಥ. ಇದರ ಪ್ರಕಾರ ಮರಣ ಎಂದರೆ ಶರೀರದಲ್ಲಿ ಚಲನೆಗಳು ಇಲ್ಲದ ಸ್ಥಿತಿಯೆಂದು ಅರ್ಥ. ಒಂದು ಶರೀರದಲ್ಲಿ ಚಲನೆಗಳು ಎಲ್ಲಾ ಯಾವಾಗ ನಿಂತುಹೋಗುತ್ತವೋ ಆಗ ಆ ಶರೀರದಲ್ಲಿನ ಆತ್ಮ ತನ್ನ ಚಲನೆಗಳನ್ನು ನಿಲ್ಲಿಸಿ ಶರೀರದ ಹೊರಗೆ ಬಂದಿದೆಯೆಂದು ಅರ್ಥ. ಆತ್ಮದೊಂದಿಗೆ ಜೀವಾತ್ಮವೂ ಸಹ ಹೊರಗೆ ಯಾವಾಗ ಬರುತ್ತಿದೆಯೋ ಆಗ ಆತ್ಮನೊಂದಿಗೆ ಶರೀರದಲ್ಲಿರುವ ಜೀವಾತ್ಮವೂ ಸಹ ಹೊರಗೆ ಯಾವಾಗ ಬರುತ್ತಿದೆಯೋ ಆಗ ಶರೀರದಲ್ಲಿನ ಚಲನೆಗಳೊಂದಿಗೆ ಕೆಲಸವಿಲ್ಲ. ಚಲನೆಗಳು ನಿಂತುಹೋಗುವುದೇ ಮರಣವೆಂದು ಅನ್ನುತ್ತಿದ್ದೇವೆ. ಮರಣಕ್ಕೂ ವಚನ, ನಿರ್ವಚನ ತಿಳಿದುಹೋಗಿದೆ. ಆದರೇ ಮರಣದಲ್ಲಿ ಒಟ್ಟು ನಾಲ್ಕು ವರ್ಗಗಳು ಇವೆ.

**ಪ್ರಶ್ನೆ :– ಇತಿಹಾಸವಾದ ರಾಮಾಯಣದಲ್ಲಿರುವ ಆಂಜನೇಯ, ಮಾರ್ಕಂಡೇಯ ಪುರಾಣದಲ್ಲಿರುವ ಮಾರ್ಕಂಡೇಯನಿಗೆ ಮರಣ ಬರಲಿಲ್ಲವೆಂದು ಅವರು ಚಿರಂಜೀವಿಗಳೆಂದು ಕೆಲವರು ಹೇಳುತ್ತಿದ್ದಾರೆ. ಹಾಗೆ ಮರಣವಿಲ್ಲದ ಜೀವನದೊಂದಿಗೆ ಇನ್ನೂ ಯಾರಾದರೂ ಇದ್ದಾರಾ?**

**ಉತ್ತರ :–** ಮರಣವಿಲ್ಲದ ಜೀವನವನ್ನು ಕಳೆಯುವವರು ಪ್ರಪಂಚದಲ್ಲಿ ಯಾರೂ ಇಲ್ಲ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ 27ನೇ ಶ್ಲೋಕದಲ್ಲಿ ***"ಜಾತಸ್ಯ ಹಿಧೃವೋ ಮೃತ್ಯುಃ ದ್ರುವಂ ಜನ್ಮ ಮೃತಸ್ಯಚ"*** ಎಂದು ಇದೆ. ಇದರ ಅರ್ಥ **"ಹುಟ್ಟಿದವನು ಸಾಯುವುದು ತಪ್ಪದು, ಸತ್ತವನು ಹುಟ್ಟುವುದು**

**ತಪ್ಪುವುದಿಲ್ಲ"** ಎಂದು ಹೇಳಲಾಗಿದೆ. ಅಷ್ಟೇ ಅಲ್ಲದೆ ಇದು ಅನಿವಾರ್ಯ ಕಾರ್ಯವೆಂದು ಸಹ ಹೇಳಿದ್ದಾರೆ. ಇದು ಬ್ರಹ್ಮವಿದ್ಯಾ ಶಾಸ್ತ್ರದಿಂದ ಹೇಳಿದ ವಾಕ್ಯವಾಗಿರುವುದರಿಂದ ಶಾಸನವಾಗಿ ತಪ್ಪದೆ ನಡೆಯುವುದಾಗಿ ಇದೆ. ಆದ್ದರಿಂದ ಯಾರು ಎಲ್ಲಿ ಹುಟ್ಟಿದರೂ, ಯಾವಾಗ ಹುಟ್ಟಿದರೂ, ಎಲ್ಲೋ ಒಂದು ಕಡೆ, ಯಾವಾಗಲೋ ಒಂದುಬಾರಿ ಶರೀರವನ್ನು ಬಿಟ್ಟು ಸತ್ತೋಗುವುದು ತಪ್ಪುವುದಿಲ್ಲ. ಇದು ಒಬ್ಬ ಮನುಷ್ಯರಿಗೇ ಅಲ್ಲದೆ ಸರ್ವ ಜೀವರಾಶಿಗಳಿಗೂ ಸಂಬಂಧಿಸಿದ ವಿಷಯವಾದ್ದರಿಂದ ಯಾರು ಹುಟ್ಟಿದರೂ ತಪ್ಪದೆ ಮರಣಿಸಬೇಕಾಗಿದೆ! ದೇವರು ಧರ್ಮಪ್ರಚಾರದ ನಿಮಿತ್ತವು ಶರೀರವನ್ನು ಧರಿಸಿ ಹುಟ್ಟಿದರೂ ಆತನು ಸಹ ಸತ್ತುಹೋಗಬೇಕಾಗಿದ್ದೇ!! ಗತಕಾಲದಲ್ಲಿ ಅದೇ ರೀತಿ ನಡೆದಿದೆ. ಹಾಗಿರುವಾಗ ಆಂಜನೇಯನು ಚಿರಂಜೀವಿ, ಸತ್ತುಹೋಗಲಿಲ್ಲ ಎನ್ನುವುದು ಧರ್ಮ ವಿರುದ್ಧವಾಗುತ್ತದೆ. ಯಾರಾದರೂ ಸ್ವಲ್ಪ ಕಾಲಕ್ಕೆ ಶರೀರವನ್ನು ಬಿಟ್ಟು ಸತ್ತುಹೋಗ ಬೇಕಾಗಿದ್ದೇ. ಹಾಗೆ ಮರಣಿಸದಂತೆ ಉಳಿದವರು ಭೂಮಿ ಮೇಲೆ ಯಾರೂ ಇಲ್ಲ. ಮಾರ್ಕಂಡೇಯನ ವಿಷಯಕ್ಕೆ ಬಂದರೆ ಅದು ಒಂದು ಪುರಾಣ ಕಥೆ. ಪ್ರಜೆಗಳಲ್ಲಿ ಭಕ್ತಿಯನ್ನು ಉಂಟುಮಾಡುವುದಕ್ಕೆ ಹೇಳಿದ ಕಲ್ಪಿತ ಕಥೆ. ಅದರಲ್ಲಿರುವ ಮಾರ್ಕಂಡೇಯನು ಇಲ್ಲವೇ ಇಲ್ಲ. ಅದು ಚರಿತ್ರೆ ಅಲ್ಲವೇ ಅಲ್ಲ. ಕೇವಲ ಪುರಾಣ ಮಾತ್ರವೇ. ಆದ್ದರಿಂದ ಅದು ಸತ್ಯವಾದ ಮಾತಲ್ಲ. ಇಲ್ಲಿಯವರೆಗು ಪ್ರಪಂಚದಲ್ಲಿ ಹುಟ್ಟಿದವರು ಮರಣಿಸದಂತೆ ಸಜೀವವಾಗಿ ಯಾರೂ ಇಲ್ಲ. ದೇವರ ಶಾಸನ ಎಲ್ಲರಿಗೂ ಸಮಾನವಾಗಿ ಅನ್ವಯಿಸುತ್ತದೆ.

**ಪ್ರಶ್ನೆ :– ಇಂದೂ (ಹಿಂದೂ) ಮತದಲ್ಲಿ ಭಗವದ್ಗೀತೆಯನ್ನು ಅನುಸರಿಸಿ ಸಾವು ಹುಟ್ಟುಗಳಿವೆಯೆಂದು ಹೇಳುತ್ತಿದ್ದಾರೆ. ಇಂದೂಗಳೆಲ್ಲರೂ ಅದೇ ಭಾವದಲ್ಲಿಯೇ ಇದ್ದಾರೆ. ಅದಕ್ಕೆ ವಿರುದ್ಧವಾಗಿ ಯಾರೂ ಹೇಳಲಾರರು. ಆದರೇ ಉಳಿದ ಎರಡು ಸಮಾಜಗಳಾದ ಕ್ರೈಸ್ತರು, ಮುಸ್ಲಿಮ್‌ರು ಸಾವು ಇದೆಯಾಗಲೀ ಪುನಃ ಹುಟ್ಟು ಇಲ್ಲ ಎನ್ನುತ್ತಿದ್ದಾರೆ. ಸತ್ತುಹೋದವನು ಪ್ರಳಯದವರೆಗೂ ಭೂಸಮಾಧಿಯಲ್ಲೇ ಇರುತ್ತಾನೆಂದು, ಪ್ರಳಯ ಕಾಲದಲ್ಲಿ ಕೊನೆಯ ದಿನದಲ್ಲಿ ಎಲ್ಲವೂ ನಾಶವಾಗುವ**

**ಸಮಯದಲ್ಲಿ ಅಲ್ಲಿಯವರೆಗೂ ಸತ್ತುಹೋಗಿ ಸಮಾಧಿಗಳಲ್ಲಿರುವ ಅವರೆಲ್ಲರನ್ನೂ ಒಟ್ಟಾಗಿ ದೇವರು ಸಮಾಧಿಗಳಿಂದ ಹೊರ ತೆಗೆದು, ಅವರ ಜೀವನಗಳಲ್ಲಿ ಅವರು ಮಾಡಿಕೊಂಡ ಪಾಪ ಪುಣ್ಯಗಳನ್ನು ಲೆಕ್ಕಿಸಿ ಸ್ವರ್ಗ ನರಕಗಳಿಗೆ ಕಳುಹಿಸುವನು ಎಂದು ಹೇಳುತ್ತಿದ್ದಾರೆ. ಪ್ರಳಯ ಕಾಲದವರೆಗು ಸಮಾಧಿಗಳಲ್ಲಿರುವವರೆಲ್ಲರೂ ಪ್ರಳಯದ ನಂತರ ಸ್ವರ್ಗನರಕಗಳಿಗೆ ಹೋಗುವರೆಂದು ಹೇಳುವುದು ಭಗವದ್ಗೀತೆ ಯಲ್ಲಿ ದೇವರು ಹೇಳಿರುವ "ಸತ್ತವನು ಹುಟ್ಟುವುದು ತಪ್ಪುವುದಿಲ್ಲ. ಹುಟ್ಟಿದವನು ಸಾಯುವುದು ತಪ್ಪುವುದಿಲ್ಲ" ಎಂಬ ಧರ್ಮಕ್ಕೆ ವಿರುದ್ಧವಾಗುತ್ತದೆ. ಇದನ್ನು ಕುರಿತು ನೀವೇನೆನ್ನುತ್ತೀರಾ?**

**ಉತ್ತರ :–** ದೇವರು ಒಂದು ಬಾರಿ ಹೇಳಿದ ಜ್ಞಾನ ಶಾಸನವಾಗಿ ಭೂಮಿಮೇಲೆ ನಿಂತುಹೋಗುತ್ತಿದೆ. ಅದು ಎಂದಿಗೂ ಬದಲಾಗುವುದಿಲ್ಲ. ದೇವರು ಭೂಮಿಮೇಲೆ ಒಂದೇ ಜ್ಞಾನವನ್ನು ಮನುಷ್ಯರೆಲ್ಲರಿಗೂ ಸಮಾನವಾಗಿ ಹೇಳಿದ್ದಾನೆ ಆದರೇ, ಹಿಂದೂಗಳಿಗೆ ಒಂದು ಜ್ಞಾನ ಮುಸ್ಲಿಮ್‍ರಿಗೆ ಮತ್ತೊಂದು ಜ್ಞಾನ ಹೇಳಲಿಲ್ಲ. ದೇವರು ತನ್ನ ಜ್ಞಾನವನ್ನು ಭೂಮಿಮೇಲೆ ಒಂದೇ ದೈವಗ್ರಂಥವಾಗಿ ಹೇಳಿದ್ದಾನೆ. ಆ ಗ್ರಂಥವನ್ನೇ ಭಾರತದೇಶದಲ್ಲಿ **ಭಗವದ್ಗೀತೆಯೆಂದೂ** ಪಶ್ಚಿಮ ದೇಶಗಳಲ್ಲಿ **ತೌರಾತ್‍ಯೆಂದೂ** ಹೇಳುತ್ತಿದ್ದೇವೆ. ದೇವರು ಹೇಳಿದ ಒಂದೇ ದೈವಗ್ರಂಥವನ್ನು ಮನುಷ್ಯರು ಬೇರೆಬೇರೆ ಪುಟಗಳಾಗಿ ಹರಿದುಕೊಂಡು, ಬೇರೆಬೇರೆ ಗ್ರಂಥಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಒಂದೇ ದೈವಗ್ರಂಥದಲ್ಲಿನ ಒಂದೇ ಜ್ಞಾನವನ್ನು ಪ್ರಜೆಗಳು ಬೇರೆಬೇರೆ ಭಾವಗಳಿಂದ ಅರ್ಥ ಮಾಡಿಕೊಳ್ಳುವುದರಿಂದ, ದೈವಗ್ರಂಥಗಳಲ್ಲಿ ದೇವರು ಹೇಳದ ವಿಷಯುವನ್ನು ಹೇಳಿದ್ದಾನೆಂದು ಹೇಳುತ್ತಿದ್ದಾರೆ. ಭಗವದ್ಗೀತೆಯಲ್ಲಿ ಯಾವ ಜ್ಞಾನವಿದೆಯೋ ಅದೇ ಜ್ಞಾನವೇ ಉಳಿದ ಎರಡು ಗ್ರಂಥಗಳಾದ ಬೈಬಲ್, ಖುರಾನ್‍ಗಳಲ್ಲಿ ಇದೆ. ಆದರೂ ಮನುಷ್ಯರ ಶ್ರದ್ಧೆಯನ್ನನುಸರಿಸಿ ಅವರಿಗೆ ದೇವರ ಜ್ಞಾನ ಅರ್ಥವಾಗುವುದು ನಡೆಯುತ್ತಿದೆ. ಮನುಷ್ಯ ಒಂದು ಜಾತಿಯೇ ಆದಾಗ ದೇವರೂ, ದೇವರು ಹೇಳಿದ ಜ್ಞಾನವೂ ಒಂದೇ ಆದಾಗ, ಎಲ್ಲರಿಗೂ ದೇವರ ಜ್ಞಾನ ಸಮಾನವಾಗಿ ಹೇಳಿದ್ದೇನೆಂದು

ದೇವರೇ ತನ್ನ ಗ್ರಂಥಗಳಲ್ಲಿ ಪ್ರಕಟಿಸಿದಾಗ, ಮತ್ತೆ ಅದನ್ನು ಒಂದೇ ವಿಧವಾಗಿ ಅರ್ಥಮಾಡಿಕೊಳ್ಳಬೇಕಾಗಿದ್ದರೂ, ತನಗಿರುವ ಸಂಕುಚಿತ ಭಾವನೆಗಳಿಂದ ಬೇರೆಬೇರೆಯಾಗಿ ಭಾವಿಸಿಕೊಂಡ ಮನುಷ್ಯ ತನಗೆ ತಿಳಿದಿರುವುದೇ ನಿಜವಾದ ಜ್ಞಾನವೆಂದು ಅಂದುಕೊಳ್ಳುತ್ತಿದ್ದಾನೆ. ದೇವರು ಮನುಷ್ಯ ಸತ್ತುಹೋಗುವನೆಂದು ಹೇಳಿದ್ದಾನೆ, ಪುನಃ ಹುಟ್ಟುವನೆಂದೂ ಹೇಳಿದ್ದಾನೆ. ಆದರೂ ಕೆಲವರು ತಮಗೆ ಅರ್ಥವಾಗಿರುವುದೇ ನಿಜವೆಂದು ಅಂದುಕೊಂಡು ತಮ್ಮನ್ನು ಅನುಸರಿಸುವ ತಮ್ಮ ಸಮಾಜಕ್ಕೆಲ್ಲಾ ಹೇಳುವುದರಿಂದ, ಉಳಿದ ಸಮಾಜದವರೆಲ್ಲಾ ತಮ್ಮ ಮತ ಹಿರಿಯರು ಹೇಳಿದ ಜ್ಞಾನವನ್ನನುಸರಿಸುವುದರಿಂದ, ಒಂದು ಸಮಾಜದಲ್ಲಿರುವ ಭಾವ ಮತ್ತೊಂದು ಸಮಾಜದಲ್ಲಿ ಇಲ್ಲದಂತೆ ಹೋಗಿ, ನಿನ್ನದು ಬೇರೆ ಜ್ಞಾನ ನನ್ನದು ಬೇರೆ ಜ್ಞಾನ, ನನ್ನ ದೇವರು ಬೇರೆ ನಿನ್ನ ದೇವರು ಬೇರೆ ಎಂಬ ಸ್ಥಿತಿಯಲ್ಲಿದ್ದಾರೆ. ಆದ್ದರಿಂದ ಭಗವದ್ಗೀತೆಯಲ್ಲಿ ಹೇಳಿರುವುದು ಬೇರೆ, ಖುರಾನ್‌ನಲ್ಲಿ, ಬೈಬಲ್‌ನಲ್ಲಿ ಹೇಳಿರುವುದು ಬೇರೆ ಎನ್ನುತ್ತಿದ್ದಾರೆ. ವಾಸ್ತವಕ್ಕೆ ಉಳಿದ ಎರಡು ಗ್ರಂಥಗಳಲ್ಲಿ ಇರುವ ಜ್ಞಾನವೇ ಮೊದಲ ಗ್ರಂಥವಾದ ಭಗವದ್ಗೀತೆಯಲ್ಲಿ (ತೌರಾತ್‌ನಲ್ಲಿ) ಇದೆ.

**ಪ್ರಶ್ನೆ :– ಆದರೇ ಉಳಿದ ಗ್ರಂಥಗಳಲ್ಲಿ ಹೇಳಿದಂತೆ ಜನ್ಮಗಳಿಲ್ಲ ಎನ್ನುವುದು ಅಸತ್ಯ ಎನ್ನುತ್ತೀರಾ?**

**ಉತ್ತರ :–** ಉಳಿದ ಗ್ರಂಥಗಳಲ್ಲಿ ಅಸತ್ಯ ಎಲ್ಲೂ ಇಲ್ಲ. ದೈವ ವಚನಗಳು ಯಾವಾದರೇ ಇವೆಯೋ ಅವೆಲ್ಲವೂ ಸತ್ಯವಾದವೇ. ಆದರೇ ಅವುಗಳನ್ನು ಮನುಷ್ಯರು ನಿಜವಾದ ಭಾವದಿಂದ ಅರ್ಥ ಮಾಡಿಕೊಂಡಿಲ್ಲ. ಆದ್ದರಿಂದ ಒಂದೇ ವಿಷಯವೇ ಹಿಂದೂಗಳಿಗೆ ಒಂದು ವಿಧ, ಮುಸ್ಲಿಮ್‌ರಿಗೆ ಮತ್ತೊಂದು ವಿಧವಾಗಿ ಅರ್ಥವಾಗಿದೆ. ಭಗವದ್ಗೀತೆಯಲ್ಲಿ ಬರೆಯಲಾಗಿರುವ ಭಾವವೇ ಖುರಾನ್‌ನಲ್ಲಿ ಇದೆ. ಆದ್ದರಿಂದ ಖುರಾನ್ ಗ್ರಂಥದಲ್ಲಿ 5ನೇ ಸೂರಾದಲ್ಲಿ, ಉಳಿದ ಸೂರಾಗಳಲ್ಲಿ ತೌರಾತ್ ಗ್ರಂಥದಲ್ಲಿನ ಜ್ಞಾನವನ್ನೇ ಸಮರ್ಥಿಸುವಂತೆ, ಧೃಢೀಕರಿಸುವಂತೆ ಹೇಳಿದ್ದಾರೆ. ಭಗವದ್ಗೀತೆ (ತೌರಾತ್) ಗ್ರಂಥದಲ್ಲಿನ ಜ್ಞಾನವನ್ನು

ಖುರಾನ್ **"ನಾನು ಧೃಢೀಕರಿಸುತ್ತಿದ್ದೇನೆ"** ಎಂದು ಹೇಳಿದರೂ ಮನುಷ್ಯ ಗ್ರಹಿಸಿಕೊಳ್ಳುವ ಸ್ಥಿತಿಯಲ್ಲಿಲ್ಲದೇ, ನಮ್ಮ ಜ್ಞಾನ ಬೇರೆ ನಿಮ್ಮ ಜ್ಞಾನ ಬೇರೆ ಎಂದು ಮಾತನಾಡುತ್ತಿದ್ದಾರೆ. ದೇವರು ತನ್ನ ಗ್ರಂಥಗಳಲ್ಲಿ **"ಸಮಸ್ತ ಮಾನವರಿಗೂ ನಾನು ಜ್ಞಾನವನ್ನು ಕೊಡುತ್ತಿದ್ದೇನೆ"** ಎಂದಿದ್ದಾನೆ. ಆ ಮಾತನ್ನು ತಮ್ಮ ಬೈಬಲ್, ಖುರಾನ್ ಗ್ರಂಥಗಳಲ್ಲಿ ಓದಿದರೂ ಅರ್ಥ ಮಾಡಿಕೊಳ್ಳದ ಮನುಷ್ಯರು ನಮ್ಮ ದೇವರು ಬೇರೆ ನಿಮ್ಮ ದೇವರು ಬೇರೆ ಎಂದು ಹೇಳುತ್ತಿದ್ದಾರೆ.

**ಪ್ರಶ್ನೆ :– ನೀವು ಇದಕ್ಕೂ ಮೊದಲು ಹೇಳಿದ ಉತ್ತರಗಳಲ್ಲಿ ಭಗವದ್ಗೀತೆಯನ್ನು ಬೇರೆ ಬೇರೆ ಪುಟಗಳಾಗಿ ಹರಿದುಕೊಂಡು, ಅವುಗಳನ್ನೇ ಬೇರೆಬೇರೆ ಗ್ರಂಥಗಳಾಗಿ ಹೇಳಿಕೊಳ್ಳುತ್ತಾ, ಬೇರೆಬೇರೆ ಜ್ಞಾನವಾಗಿ ಹೇಳುತ್ತಿದ್ದಾರೆಂದು ಎಂದಿದ್ದೀರ. ನಿಮ್ಮ ಮಾತು ಸತ್ಯವೆನ್ನುತ್ತೀರಾ? ನಂಬಬೇಕೆನ್ನುತ್ತೀರಾ?**

**ಉತ್ತರ :–** ನನ್ನ ಮಾತನ್ನು ನೀವು ನಂಬಬೇಕೆಂದು ನಾನು ಹೇಳುತ್ತಿಲ್ಲ. ನಾನು ದೈವಗ್ರಂಥದಲ್ಲಿ ಶಾಸ್ತ್ರಬದ್ಧವಾಗಿರುವ ವಿಷಯವನ್ನೇ ಹೇಳುತ್ತಿದ್ದೇನೆ. ಅದಕ್ಕೆ ಆಧಾರ ಬೇಕೆಂದರೇ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ 6ನೇ ಸೂರಾ, 91ನೇ ಆಯತ್‌ನಲ್ಲಿ ಹೀಗಿದೆ ನೋಡಿರಿ. **(6–91) "ಅಲ್ಲಾಹ್ ಯಾವ ಮಾನವನ ಮೇಲೆ ತನ್ನ ಜ್ಞಾನವನ್ನು ಅವತರಿಸುವಂತೆ ಮಾಡಲಿಲ್ಲ ಎಂದು ಹೇಳಿದಾಗ ಈ ಜನರು ಅಲ್ಲಾಹ್‌ನನ್ನು ಅರ್ಥಮಾಡಿಕೊಳ್ಳಬೇಕಾದ ರೀತಿಯಲ್ಲಿ ಅರ್ಥಮಾಡಿಕೊಂಡಿಲ್ಲ. ಅವರನ್ನು ಕೇಳು! ಮೂಸಾ ತಂದಿರುವ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದ್ದಾರೆ? ಆ ಗ್ರಂಥ ಒಂದು ಜ್ಯೋತಿ, ಮಾನವರಿಗಾಗಿ ಮಾರ್ಗದರ್ಶಕ. ನೀವು ಅದನ್ನು ಬೇರೆಬೇರೆ ಕಾಗದಗಳಾಗಿ ವಿಭಜಿಸಿ ತೋರಿ ಸುತ್ತಿದ್ದೀರ. ಎಷ್ಟೋ ವಿಷಯಗಳನ್ನು ಮುಚ್ಚಿಡುತ್ತಿದ್ದೀರಾ. ನಿಮಗಾಗಲಿ, ನಿಮ್ಮ ಹಿರಿಯರಿಗಾಗಲಿ ತಿಳಿಯದ ಎಷ್ಟೋ ವಿಷಯಗಳು ಇಂದುಮೂಲವಾಗಿ ನಿಮಗೆ ಕಲಿಸಲಾಗಿದೆ. ಅದನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ಯೇ ಎಂದು ಹೇಳು, ಆ ನಂತರ ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿಯೇ ಆಡಲು ಬಿಡಿ"** ಈ ವಾಕ್ಯದಲ್ಲಿ ಅಲ್ಲಾಹ್ ಕೊಟ್ಟಿರುವ ತೌರಾತ್‌ನ್ನು (ಭಗವದ್ಗೀತೆಯನ್ನು)

ಬೇರೆಬೇರೆ ಕಾಗದಗಳಾಗಿ ವಿಭಜಿಸಿ ತೋರಿಸುತ್ತಿದ್ದಾರೆಂದು ಇದೆಯಲ್ಲವೆ! ಬೇರೆಬೇರೆ ಕಾಗದಗಳೆಂದರೇ ಬೇರೆಬೇರೆ ಗ್ರಂಥಗಳೆಂದು ಅರ್ಥಮಾಡಿಕೊಳ್ಳಬೇಕು. ತೌರಾತ್ ಗ್ರಂಥವೇ ಭಗವದ್ಗೀತೆ ಗ್ರಂಥ. ಬೇರೆಬೇರೆ ಕಾಗದಗಳೇ ಬೇರೆಬೇರೆ ಗ್ರಂಥಗಳಾದರೇ ಬೈಬಲ್ ಖುರಾನ್ ಎಂದು ಅರ್ಥಮಾಡಿಕೊಳ್ಳಬೇಕು. ತೌರಾತ್‌ನಿಂದ ವಿಭಜಿಸಲಾಗಿರುವ ಗ್ರಂಥಗಳು ಬೈಬಲ್, ಖುರಾನ್ ಎನ್ನುವುದಕ್ಕೆ ಭಗವದ್ಗೀತೆಯಲ್ಲಿರುವ ಜ್ಞಾನ ಎರಡು ಗ್ರಂಥಗಳಲ್ಲಿ ಇದೆ. ಎರಡು ಗ್ರಂಥಗಳಲ್ಲಿನ ಜ್ಞಾನವೇ ತೌರಾತ್ (ಭಗವದ್ಗೀತೆ) ನಲ್ಲಿಯೂ ಇದೆ. ಇದಕ್ಕಿಂತ ಸಾಕ್ಷಿ ಬೇಕಿಲ್ಲ.

**ಪ್ರಶ್ನೆ :– ಮರಣಿಸಿದ ಮನುಷ್ಯ ಭೂಸಮಾಧಿಯಲ್ಲಿ ಪ್ರಳಯ ನಡೆಯುವವರೆಗು ಇರುತ್ತಾನೆಂದೂ, ಪ್ರಳಯದಲ್ಲಿ ಎಲ್ಲಾ ನಾಶವಾಗಿ ಕೊನೆಯ ದಿನದಲ್ಲಿ ಭೂಸಮಾಧಿಯಿಂದ ಹೊರಗೆ ಅಲ್ಲಾಹ್ ಎಬ್ಬಿಸುವವರೆಗು ಅಲ್ಲೇ ಸಮಾಧಿಯಲ್ಲೇ ಸತ್ತುಹೋದವನು ಇರುತ್ತಾನೆಂದು ಮುಸ್ಲಿಮ್‌ರು ಹೇಳುತ್ತಿದ್ದಾರೆ. ಅದೇ ಸತ್ಯವೆಂದು, ತಮ್ಮ ದೈವಗ್ರಂಥವಾದ ಖುರಾನ್‌ನಲ್ಲಿ ಈ ವಿಷಯವನ್ನು ಹೇಳಿದ್ದಾರೆಂದು ಮುಸ್ಲಿಮ್‌ರು ಹೇಳುತ್ತಿದ್ದಾರೆ. ಅವರ ಮಾತು ಸತ್ಯವಾ ಅಸತ್ಯವಾ?**

**ಉತ್ತರ :–** ಖುರಾನ್‌ನಲ್ಲಿ ಹೇಳಿದ ಮಾತು ವಾಸ್ತವವೇ. ಆದರೇ ದೇವರು ಹೇಳಿದ ಮಾತನ್ನು ಹೇಗೆ ಅರ್ಥಮಾಡಿಕೊಳ್ಳಬೇಕೋ ಹಾಗೆ ನಾವು ಅರ್ಥಮಾಡಿಕೊಂಡಿಲ್ಲ. ಗ್ರಂಥದಲ್ಲಿ 'ಪ್ರಳಯ' ಎಂಬ ಮಾತು ಇರುವುದು ನಿಜವೇ. ಆದರೇ ಪ್ರಳಯವೆಂದರೇ ಏನೋ? ಯಾರಿಗೂ ತಿಳಿದಿಲ್ಲ. ಹಾಗೆಯೇ ಗ್ರಂಥದಲ್ಲಿ 'ಅಂತ್ಯದಿನ' ಎಂದು ಇದೆ. ಆದರೇ ಅಂತ್ಯದಿನವೆಂದರೇ ಏನೋ? ಯಾರಿಗೂ ತಿಳಿದಿಲ್ಲ. ಆದ್ದರಿಂದ ತಪ್ಪು ಭಾವನೊಯೊಳಗೆ ಹೋಗುವ ಅವಕಾಶವಿದೆ. ದೈವ ಗ್ರಂಥವಾದ ಖುರಾನ್‌ನಲ್ಲಿ 'ಸಮಾಧಿ' ಎಂದು ಇದೆ. ಆದರೇ ಸಮಾಧಿ ಎಂದರೇ ಏನೋ? ಅದರ ನಿಜ ಭಾವವು ಮಾತ್ರ ಯಾರಿಗೂ ತಿಳಿಯದು. ಹೀಗೆ ಗ್ರಂಥದಲ್ಲಿರುವ ಪದಗಳಿಗೆ ಅರ್ಥ ತಿಳಿಯದಿರುವುದರಿಂದ, ಅವುಗಳ ನಿಜ ಭಾವ ತಿಳಿಯದಂತೆ ಹೋಗಿ ನಿಜವಾದ ಸತ್ಯ ಹಿಂದುಳಿದು, ಅಸತ್ಯವೇ ಪ್ರಚಾರವಾಗಿದೆ. ಅದರಿಂದ ಮನುಷ್ಯ ತಪ್ಪು ದಾರಿ ಹಿಡಿದು ಹೋಗಿದ್ದಾನೆ.

ಇಲ್ಲಿ ಪ್ರಳಯವೆಂದರೇ ಹುಟ್ಟಿರುವುದೆಲ್ಲಾ ನಾಶವಾಗುವುದೆಂದು ಎಲ್ಲರಿಗೂ ತಿಳಿದಿದೆ. ಹಾಗೆಯೇ ಅಂತ್ಯದಿನವೆಂದರೇ ಪ್ರಪಂಚಕ್ಕೆ ಕೊನೆಯದಿನ ವೆಂದು ಸರ್ವ ಸಾಧಾರಣವಾಗಿ ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಇನ್ನು ಸಮಾಧಿ ಎಂದರೇ ಎಲ್ಲರ ದೃಷ್ಟಿ ಭೂಸಮಾಧಿಯಕಡೆಗೇ ಹೋಗುವು ದರಿಂದ ಎಲ್ಲರೂ ಸಮಾಧಿ ಎಂದರೇ ಶವವನ್ನು ಹೂತಿಟ್ಟ ಗುಂಡಿಯೇ ಅಂದುಕೊಳ್ಳುತ್ತಿದ್ದಾರೆ. ಆದ್ದರಿಂದ ಖುರಾನ್‌ನಲ್ಲಿ ದೇವರು ಹೇಳಿರುವುದು ಒಂದು ಜ್ಞಾನವಾದರೇ ಮನುಷ್ಯರಿಗೆ ಅರ್ಥವಾಗಿರುವುದು ಮತ್ತೊಂದು ಜ್ಞಾನವಾಗಿದೆ. ಈ ವಿಷಯದಲ್ಲಿ ಪೂರ್ತಿ ಅವಗಾಹನಾ ಲೋಪ ಏರ್ಪಟ್ಟಿದೆ. ಖುರಾನ್ ಗ್ರಂಥದಲ್ಲಿ ಸ್ಥೂಲ ಜ್ಞಾನ ಸ್ವಲ್ಪ ಸೂಕ್ಷ್ಮ ಜ್ಞಾನ ಸ್ವಲ್ಪ ಇದೆಯೆಂದು ಹೇಳಿದ್ದಾರೆ. ಸ್ಥೂಲ ಜ್ಞಾನವನ್ನು ಮುಹಕಮಾತ್, ಸೂಕ್ಷ್ಮ ಜ್ಞಾನವನ್ನು ಮುತಷಾಬಿಹಾತ್ ವಾಕ್ಯಗಳೆಂದು ಸೂರಾ 3, ಆಯತ್ 7ರಲ್ಲಿ ಹೇಳಲಾಗಿದೆ. ಇಲ್ಲಿ ಪ್ರಳಯವೆಂದರೂ, ಅಂತಿಮ ದಿನವೆಂದರೂ, ಸಮಾಧಿ ಎಂದರೂ ಸ್ಥೂಲವಾದ ಅರ್ಥವನ್ನು ತೆಗೆದುಕೊಳ್ಳಬಾರದು. ಸೂಕ್ಷ್ಮವಾದ ಅರ್ಥವನ್ನು ತೆಗೆದುಕೊಳ್ಳಬೇಕಾದ ಅವಶ್ಯವಿದೆ. ಸ್ಥೂಲ ಅರ್ಥದಿಂದ ಅಲ್ಲಿ ಹೇಳಲಿಲ್ಲ. ಸ್ಥೂಲ ಅರ್ಥದಿಂದ ಹೇಳಿಕೊಂಡರೇ ಅದು ಪ್ರಪಂಚ ಪ್ರಳಯವಾಗುತ್ತದೆ. ದೇವರು ಪ್ರಪಂಚ ಪ್ರಳಯವನ್ನು ಕುರಿತು ಅಲ್ಲಿ ಹೇಳಲಿಲ್ಲ. ಮನುಷ್ಯನ ಶರೀರದಲ್ಲಿ ನಡೆಯುವ ಪ್ರಳಯವನ್ನು ಕುರಿತು ಹೇಳಿದ್ದಾನೆ. ಪ್ರಪಂಚ ಪ್ರಳಯ ಎಂದಿಗೂ ನಡೆಯುವುದಿಲ್ಲ. ಶರೀರದೊಳಗೆ ಪ್ರಳಯ ನಡೆದು ಶರೀರ ನಾಶವಾಗುವುದು ನಡೆಯುತ್ತಿದೆ. ಯಾವಾಗ ಶರೀರ ನಾಶವಾಗಿ ಜೀವಿಗೆ ನಿವಾಸ ಯೋಗ್ಯವಾಗದೇ ಹೋಗುತ್ತದೊ, ಆಗ ಶರೀರದಲ್ಲಿನ ಜೀವಿಯು (ಜೀವಾತ್ಮ) ಶರೀರವನ್ನು ಬಿಟ್ಟು ಹೊರಗೆ ಬರಬೇಕಾಗುತ್ತದೆ. ಜೀವಾತ್ಮನೊಂದಿಗೆ ಆತ್ಮವೂ ಸಹ ಹೊರಗೆ ಬರುತ್ತದೆ. ಆತ್ಮ, ಜೀವಾತ್ಮ ಎರಡೂ ಜೋಡಿ ಆತ್ಮಗಳಾಗಿರುವುದರಿಂದ ಒಂದೇ ಬಾರಿ ಎರಡೂ ಹೊರಗೆ ಬರುತ್ತವೆ. ಅಲ್ಲಿಯವರೆಗು ಶರೀರದೊಂದಿಗೆ ಸಂಬಂಧವಿರುವ ಜೀವಾತ್ಮನಿಗೆ ಶರೀರದೊಂದಿಗೆ ಎಂತಹ ಸಂಬಂಧವೂ ಇಲ್ಲದಂತೆ ಹೋಗುವುದು. ಒಂದರೊಂದಿಗೆ ಮತ್ತೊಂದು ಎಂದಿಗೂ

ಬೇರೆಯಾಗದಂತೆ ಜೋಡಿ ಆತ್ಮಗಳಾಗಿ ಜೀವಾತ್ಮ ಆತ್ಮ ಎರಡೂ ಜೊತೆಯಾಗಿ ಇರುತ್ತವೆ. ವಿವರವಾಗಿ ಹೇಳಬೇಕೆಂದರೇ ಆತ್ಮ ಅಧೀನದಲ್ಲಿ, ಆತ್ಮ ಆವರಣದಲ್ಲಿ ಜೀವಾತ್ಮ ಬಂಧಿಸಲ್ಪಟ್ಟಿರುತ್ತದೆ. ಬಾಕೀ ಕೊಟ್ಟಿರುವ ಅವನ ಕೈಯ್ಯಲ್ಲಿ ಬಾಕೀ ಇರುವವನು ಇರುವಂತೆ ಆತ್ಮ ಅಧೀನದಲ್ಲಿ ಜೀವಿಯು ಇರುತ್ತಾನೆ. ಇದನ್ನ ನುಸರಿಸಿ ಜೀವಿಯು (ಜೀವಾತ್ಮ) ಎಂದಿಗೂ ಸ್ವತಂತ್ರನಲ್ಲವೆಂದು ನಿರೂಪಣೆಯಾಗಿ ತಿಳಿಯುತ್ತದೆ.

ಉದಾಹರಣೆಗೆ ಒಂದು ವಿಷಯವನ್ನು ಗಮನಿಸೋಣ. ಒಬ್ಬ ಯಜಮಾನ ಮತ್ತೊಬ್ಬ ವ್ಯಕ್ತಿಗೆ ಲಕ್ಷರೂಪಾಯಿ ಹಣವನ್ನು ಸಾಲವಾಗಿ ಕೊಟ್ಟಿದ್ದಾನೆಂದುಕೊಳ್ಳೋಣ. ಸಾಲದಂತಿರುವ ಲಕ್ಷರೂಪಾಯಿಗಳು ತೀರಿಸುವ ವರೆಗು ಸಾಲ ಇರುವವನು ಸಾಲ ಕೊಟ್ಟವನ ಕೈಯ್ಯಲ್ಲಿ ಇರಬೇಕಾದ್ದೇ ಎಂಬ ನಿಯಮವಿದೆ. ಬಾಕೀ ತೆಗೆದುಕೊಂಡಾಗ ಮಾಡಿಕೊಂಡ ನಿಯಮದ ಪ್ರಕಾರ ಸಾಲ ಮಾಡಿದವನು, ಸಾಲ ಕೊಟ್ಟಿರುವವನ ಮಾತಿನ ಪ್ರಕಾರ ನಡೆಯಬೇಕಾಗಿದೆ. ಒಂದು ವೇಳೆ ಸಾಲ ಇರುವವನು ಬೇಗನೇ ಸಾಲ ತೀರಿಸುವುದಾದರೇ ಪರವಾಗಿಲ್ಲ. ಸಾಲ ಕೊಟ್ಟಿರುವವನ ಅಧೀನದಿಂದ ಹೊರಬಿದ್ದು ಸ್ವತಂತ್ರನಾಗಿ ಉಳಿಯಬಹುದು. ತೀರಿಸಲಾರದೇ ಹೋದರೇ ತೀರಿಸುವವರೆಗು ಸಾಲ ಕೊಟ್ಟಿರುವವನ ಕೈಯ್ಯಲ್ಲಿ ಕೀಲು ಗೊಂಬೆಯಂತೆ ಇರಬೇಕಾಗಿದೆ. ಮೊದಲು ಹತ್ತು ರೂಪಾಯಿಗಳ ಸಾಲದಿಂದ ಶುರು ಮಾಡಿ ಅದನ್ನು ತೀರಿಸಲಾರದೆ ಅದಕ್ಕೆ ಜೊತೆಯಾಗಿ ಇನ್ನೂ ಸ್ವಲ್ಪ ಸಾಲ ಮಾಡುತ್ತಾ ಹತ್ತು ರೂಪಾಯಿಗಳಿಂದ ನೂರು, ಸಾವಿರ, ಲಕ್ಷಗಳವರೆಗೂ ಬೆಳೆಸುತ್ತಾ ಹೋದರೆ ಸಾಲ ಬೆಳೆದೆಹೋಗುತ್ತದೆ ಹೊರತು ಕಡಿಮೆಯಾಗುವುದಂತೂ ಇರುವುದಿಲ್ಲ. ಅಂಥವನಿಗೆ ಬಾಕೀ ಕೊಟ್ಟವನ ಕೈಯಿಂದ ಹೊರಬೀಳುವ ಅವಕಾಶವೇ ಇಲ್ಲ. ಆದ್ದರಿಂದ ಅವನು ಎಂದಿಗೂ ಸಾಲಗಾರನಾಗಿ, ಎಷ್ಟು ಕಷ್ಟಪಟ್ಟರೂ ಸಾಲ ತೀರದೆ ಸಾಲ ಕೊಟ್ಟಿರುವವನ ಅಧೀನದಲ್ಲಿ ಇರಬೇಕಾಗಿದ್ದೇ. ಹಾಗಲ್ಲದೇ ಇರುವ ಸಾಲದ ಬಗ್ಗೆ ಯೋಚಿಸಿ ದವನಾಗಿ, ತಿಳಿಯದೆ ಮಾಡಿದ ಸಾಲ ಎಷ್ಟಿದ್ದರೂ ಅದನ್ನು ತೀರಿಸಿಕೊಳ್ಳುವ

ಉಪಾಯವನ್ನು ಹುಡುಕಿದರೇ ದಾರಿ ಸಿಗುತ್ತದೆ. ಆ ದಾರಿ ಪ್ರಕಾರ ಬೇಗನೇ ಹೊರಬೀಳಬಹುದು. ಎಷ್ಟೋ ಕಾಲದಿಂದ ಸಾಲ ಮಾಡುತ್ತಾ ಬರುವವನಿಗೆ ಇದ್ದಕ್ಕಿದ್ದಂತೆ ಸಾಲ ತೀರಿಸುವ ದಾರಿ ಹೇಗೆ ಸಿಗುತ್ತದೆಂದು ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಏನೆಂದರೇ! ಸಾಲ ಮಾಡುವವನಿಗೆ ಸಾಲ ತೀರಿಸುವ ದಾರಿ ತಿಳಿಯದೇ ಪ್ರತಿ ವರ್ಷ ಸಾಲವನ್ನು ಬೆಳಸಿಕೊಳ್ಳುತ್ತಾ ಹೋಗುತ್ತಿದ್ದಾನೆ. ಆದ್ದರಿಂದ ಸಾಲ ಮಾಡಿದವನು, ಸಾಲ ಕೊಟ್ಟಿರುವವನ ಸಲಹೆಯನ್ನು ಅನುಸರಿಸುತ್ತಾ ಸುಲಭವಾಗಿ ಸಾಲ ತೀರಿಸಬಹುದು. ಸಾಲ ಕೊಟ್ಟಿರುವವನೂ ಸಹ ತನ್ನ ಸಾಲವನ್ನು ತೀರಿಸುವ ಉಪಾಯವನ್ನು ಸಾಲ ಕೊಟ್ಟಾಗಲೇ ಹೇಳಿದ್ದಾನೆ. ಆದರೇ ಸಾಲ ತೆಗೆದುಕೊಂಡವನು ನಾನು ಬಾಕೀ ಇದ್ದೇನೆ ಎನ್ನುವ ಮಾತನ್ನೇ ಮರೆತುಹೋಗಿದ್ದಾನೆ. ಬಾಕೀ ವಿಷಯವೇ ಮರೆತವನು ಸಾಲ ಕೊಟ್ಟವನನ್ನು ಪೂರ್ತಿಯಾಗಿ ಮರೆತುಹೋಗಿದ್ದಾನೆ.

ಸಾಲ ಕೊಟ್ಟವನು ಸಾಲ ತೆಗೆದುಕೊಂಡವನಿಗೆ ಸಾಲ ಕೊಟ್ಟಾಗಲೇ ಒಂದು ಮಾತನ್ನು ಹೇಳಿದ್ದಾನೆ. "ನಿನಗೆ ನಾನು ಹತ್ತು ರೂಪಾಯಿಗಳ ಸಾಲ ಕೊಡುತ್ತಿದ್ದೇನೆ. ಹತ್ತು ರೂಪಾಯಿಗಳು ತೀರುವುದಕ್ಕೆ ಹತ್ತು ದಿನಗಳು ಸುಮ್ಮನಿರು. ಸುಮ್ಮನಿದ್ದರೂ ನಿನ್ನ ಸಾಲ ತೀರಿಹೋಗುತ್ತದೆ" ಎಂದು ಹೇಳಿದ್ದಾನೆ. ಕೊಟ್ಟವನು ತೆಗೆದುಕೊಂಡವನ ಮೇಲೆ ದಯೆತೋರಿಸಿ, ಹತ್ತು ದಿನಗಳು ಸುಮ್ಮನಿದ್ದರೇ ಸಾಕೆಂದು ಹೇಳಿದ್ದಾನೆ. ಅಷ್ಟು ಸುಲಭವಾಗಿ ಸಾಲ ತೀರುವ ಉಪಾಯವನ್ನು ಹೇಳಿದರೇ ಅವನ ಮಾತನ್ನು ನಾನೇಕೆ ಕೇಳಬೇಕೆಂದು, ನಾನೇ ಆತನಿಗಿಂತ ಬುದ್ಧಿವಂತನೆಂದು ಅಂದುಕೊಳ್ಳುವುದರಿಂದ ಕೊಟ್ಟಿರುವ ಆತನು ಹೇಳಿದಂತೆ ತೆಗೆದುಕೊಂಡವನು ಕೇಳಲಿಲ್ಲ. ಆ ಸಾಲ ತೀರಲಿಲ್ಲ. ನಾನು ಕಷ್ಟಪಟ್ಟು ತೀರಿಸುತ್ತೇನೆಂದು ಅಂದುಕೊಂಡರೂ, ಎಷ್ಟು ಕಷ್ಟಪಟ್ಟರೂ ಆ ಸಾಲ ತೀರದೇ ಹೋದರೂ ಇನ್ನೂ ಬೆಳೆಯುತ್ತಲೇ ಬರುತ್ತಿದೆ. ಈಗಲಾದರೂ ಸಾಲ ಕೊಟ್ಟಿರುವವನನ್ನು ಮರೆತುಹೋಗದಂತೆ ಆತನನ್ನು ನೆನಪಿಟ್ಟುಕೊಂಡು, ಆತನ ಮಾತಿನ ಪ್ರಕಾರ ಒಂದು ರೂಪಾಯಿಗೆ ಒಂದು ದಿನ ಸುಮ್ಮನಿದ್ದರೆ ಸಾಲ

ತೀರಿಹೋಗುತ್ತದಲ್ಲವೆ! ಮೊದಲು ತೆಗೆದುಕೊಂಡಾಗ 10 ರೂಪಾಯಿಗಳೇ ನಿಜವಾದ ಸಾಲ. ಆದರೇ ಅದು ಬೆಳೆಯುತ್ತಾ ಬಂದು ಈದಿನ ಕೆಲವು ಸಾವಿರ, ಲಕ್ಷ, ಕೋಟಿಗಳವರೆಗು ಹೋಗಿದೆ. ಅವರವರ ಕೆಲಸಗಳನ್ನನುಸರಿಸಿ ಅವರವರ ಸಾಲ ಬೆಳೆದಿದೆ ಇಂದಿಗಾದರೂ ಸಾವಿರ ರೂಪಾಯಿಗಳು ಸಾಲ ಇದ್ದವನು ಸಾವಿರ ದಿನಗಳು ಮಾನಸಿಕವಾಗಿ, ಶಾರೀರಕವಾಗಿ ಯಾವ ಕೆಲಸ ಮಾಡದಂತೆ ಸುಮ್ಮನಿದ್ದರೇ ಸಾಲ ತೀರಿಹೋಗುತ್ತದೆ. ಸಾವಿರ ರೂಪಾಯಿಗಳ ಸಾಲಕ್ಕೆ ಸುಮಾರು ಸಾವಿರ ದಿನಗಳು ಅಂದರೇ ಎರಡು ವರ್ಷಗಳ, ಒಂಬತ್ತು ತಿಂಗಳ ಒಂದು ದಿನವಾಗುತ್ತದೆ. ಈ ರೀತಿ ಎಷ್ಟು ಬಾಕಿ ಹೆಚ್ಚಾಗಿದ್ದರೇ ಅಷ್ಟು ಹೆಚ್ಚಿನ ಕಾಲ ಹಿಡಿಯುತ್ತಿದೆ. ಒಂದು ಬಾರಿ ಸಾಲ ತೀರಿದರೇ, ಸಾಲ ಕೊಟ್ಟಿರುವವನೊಂದಿಗೆ ಸಂಬಂಧವಿಲ್ಲದಂತೆ ಹೋಗುತ್ತದೆ. ಸಾಲ ತೀರದವರೆಗೂ ಬಾಕೀ ಕೊಟ್ಟವನ ಕೈಯ್ಯಲ್ಲಿ 'ಸಾಲ' ಎಂಬ ಹಗ್ಗದಿಂದ ಬಂಧಿಸಲ್ಪಟ್ಟಿರಬೇಕಾಗುತ್ತದೆ. ಸಾಲ ತೆಗೆದುಕೊಂಡ ನಿಯಮದ ಪ್ರಕಾರ, ಸಾಲ ಕೊಟ್ಟಿರುವವನು ಎಲ್ಲಿಗೆ ಹೋದರೇ ಸಾಲ ತೆಗೆದುಕೊಂಡವನು ಅವನ ಹಿಂದೆ ಅಲ್ಲಿಗೆ ಹೋಗಬೇಕಾಗಿರುತ್ತದೆ. ಅಷ್ಟೇ ಅಲ್ಲದೇ ಅವನ ಇಷ್ಟ ಬಂದ ಕೆಲಸವನ್ನು ಮಾಡಿಸಿ ಅವನಿಗೆ ಇಷ್ಟ ಬಂದಿರುವುದನ್ನು ಕೊಟ್ಟರೇ, ಅದನ್ನೇ ತಿಂದು ಕಾಲ ಕಳೆಯಬೇಕಾಗಿರುತ್ತದೆ ಸಾಲ ತೀರುವವರೆಗೂ ಸಾಲ ತೆಗೆದುಕೊಂಡವನಿಗೆ ಯಾವ ಸ್ವತಂತ್ರತೆ ಇರುವುದಿಲ್ಲ. ಇಲ್ಲಿಯವರೆಗೂ ಕೇಳಿರುವುದನ್ನು ಅನುಸರಿಸಿ ಸಾಲ ಕೊಟ್ಟಿರುವವನನ್ನು ಕುರಿತು, ಹಾಗೆಯೇ ಸಾಲ ತೆಗೆದುಕೊಂಡವನನ್ನು ಕುರಿತು ವಿವರವಾಗಿ ತಿಳಿದುಹೋಗಿದೆ. ಇವರಿಬ್ಬರ ಸಂಬಂಧ ಹೇಗಿದೆಯೋ, ಹಾಗೆಯೇ ಶರೀರದಲ್ಲಿ ಆತ್ಮ, ಜೀವಾತ್ಮವೊಂದರ ಸಂಬಂಧವಿದೆ. ಅವರಿಬ್ಬರ ಸಂಬಂಧವನ್ನು ವಿವರಿಸಿದರೇ ಹೀಗಿದೆ ನೋಡಿರಿ.

ಇದು ಎಲ್ಲವೂ ಒಂದು ನಡೆದ ಕಥೆಯಂತಿದ್ದರೂ ವಾಸ್ತವಕ್ಕೆ ಇದು ಎಲ್ಲರ ಶರೀರಗಳಲ್ಲಿಯೂ ನಿರಂತರ ನಡೆಯುತ್ತಿರುವ ಯಥಾರ್ಥಕಥೆಯಂತೆ ಇದೆ. ಇದು ಯಾರಿಗೋ ಸಂಬಂಧಿಸಿದ ವಿಷಯದಂತೆ ನೋಡದೇ ತನ್ನ

ಸ್ವಂತ ವಿಷಯವಾಗಿ ಪ್ರತಿ ಒಬ್ಬರೂ ಗಮನಿಸಬೇಕು. ನೀನು ಒಂದು ಶರೀರವನ್ನು ಧರಿಸಿ ಆ ಶರೀರದಲ್ಲಿ ನಿವಾಸಿಸುತ್ತಿದ್ದೀಯ. ನೀನು ಜೀವಾತ್ಮ ಎಂಬ ಹೆಸರಿನಿಂದ ಶರೀರದಲ್ಲಿ ಇದ್ದೀಯ. ಮೇಲ್ನೋಟಕ್ಕೆ ನಿನ್ನ ಶರೀರವನ್ನು ಗುರುತಿಸುವುದಕ್ಕೆ ಹೆಸರು ರಾಮನೆಂದೋ, ರಂಗನೆಂದೋ, ರಾವೂ ಎಂದೋ, ಗೌಡ ಎಂದೋ ಇದ್ದರೂ, ನೀನು ಮಾತ್ರ ಜೀವಾತ್ಮನೇ. ಹೊರಗಿನ ಹೆಸರುಗಳೆಲ್ಲವೂ ನಿನ್ನ ಶರೀರವನ್ನು ಗುರುತಿಸುವುದಕ್ಕೆ ಇಟ್ಟುಕೊಂಡಿರುವವೇ ಹೊರತು ವಾಸ್ತವಕ್ಕೆ ಅದು ನಿನ್ನ ಹೆಸರಲ್ಲ. ನೀನು ಶರೀರದಲ್ಲಿ ಎಷ್ಟು ಕಾಲವಿದ್ದರೂ ಅಷ್ಟು ಕಾಲ ನೀನು ಜೀವಾತ್ಮನೇ! ಶರೀರದಲ್ಲಿ ಕಣ್ಣಿನಿಂದ ಮುಂದಕ್ಕೇ ನೋಡುತ್ತಿದ್ದೇವೆ. ಯಾರೂ ಸಹ ಹಿಂದಕ್ಕೆ ನೋಡಿಕೊಳ್ಳುತ್ತಿಲ್ಲ. ಯಾರಾದರೂ ಹಿಂದಕ್ಕೆ ತಿರುಗಿ ನೋಡಿಕೊಂಡರೇ ತನ್ನ ಹಿಂದೆ ಮತ್ತೊಬ್ಬನಿದ್ದಾನೆಂದು ತಿಳಿಯುತ್ತದೆ. ಯಾರು ಹಿಂತಿರುಗಿ ನೋಡಿಕೊಂಡರೂ, ನೋಡಿಕೊಳ್ಳದೇ ಹೋದರೂ ವಾಸ್ತವವಾಗಿ ಅವನ ಹಿಂದೆ ಮತ್ತೊಬ್ಬನಿದ್ದಾನೆ. ಅವನೇ ಕಥೆಯಲ್ಲಿ ಸಾಲ ಕೊಟ್ಟವನಿರುವಂತೆ ನಮ್ಮ ಶರೀರದಲ್ಲಿ ನಮಗೆ ಸಾಲ ಕೊಟ್ಟಿರುವವನಾಗಿ ಇದ್ದಾನೆ. ಸಾಲ ತೆಗೆದುಕೊಂಡವನ ಹೆಸರು ಜೀವಾತ್ಮ ಆದರೇ, ಸಾಲ ಕೊಟ್ಟವನ ಹೆಸರು ಆತ್ಮನಾಗಿಯೇ ಇದೆ. ಕಥೆಯಲ್ಲಿ ಮೊದಲು ಹತ್ತು ರೂಪಾಯಿಗಳು ಸಾಲ ತೆಗೆದುಕೊಂಡಂತೆ, ಮೊದಲು ಸೃಷ್ಟಿ ಆದಿಯಲ್ಲಿ ಹತ್ತು ದಿನಗಳಿಗೆ ಸರಿಹೋಗುವ 'ಕರ್ಮ' ಎನ್ನುವುದನ್ನು ಸಾಲದಂತೆ ಪಡೆಯಲಾಗಿದೆ. ಕಥೆಯಲ್ಲಿರುವವನು ಹತ್ತು ರೂಪಾಯಿಗಳ ಹಣವನ್ನು ಕೊಟ್ಟರೇ, ಶರೀರದಲ್ಲಿ ಇರುವವನು ಹಣಕ್ಕೆ ಬದಲು ಕರ್ಮವನ್ನು ಸಾಲದಂತೆ ಕೊಟ್ಟಿದ್ದಾನೆ. ಕಥೆಯಲ್ಲಿ ಸಾಲ ಕೊಟ್ಟವನೇ ತನ್ನ ಸಾಲ ತೀರಿಹೋಗುವ ಉಪಾಯವನ್ನು ಹೇಳಿದಂತೆ, ಮೊದಲು ಕರ್ಮವನ್ನು ಅಂಟಿಸಿರುವವನೇ ಆ ಕರ್ಮ ತೀರುವ ವಿಧಾನವನ್ನು ಸಹ ಹೇಳಿದ್ದಾನೆ. ಆ ವಿಧಾನವೇ ಯೋಗಕ್ಕೆ ಸಂಬಂಧಿಸಿದ ಜ್ಞಾನವೆಂದು ತಿಳಿಯುತ್ತದೆ. ಸೃಷ್ಟಿ ಆದಿಯಲ್ಲಿ ಕರ್ಮವನ್ನು ಕಟ್ಟಿ ಜೀವಿಗೆ ಕೊಟ್ಟವನೇ ಆ ಕರ್ಮ ತೀರುವುದಕ್ಕೆ ಕಥೆಯಲ್ಲಿ ಹೇಳಿದಂತೆ ಮಾನಸಿಕವಾಗಿ ಆಗಲೀ, ಶಾರೀರಕವಾಗಿ ಆಗಲೀ ಏನೂ ಮಾಡದೇ ಹತ್ತು ದಿನಗಳು ಇದ್ದರೂ ತೀರಿಹೋಗುತ್ತದೆಂದು ಸಹ ಹೇಳಿದ್ದಾನೆ. ಆ ವಿಧಾನಕ್ಕೇ

**"ಯೋಗ"** ಎಂದು ಹೆಸರಿಟ್ಟಿದ್ದಾನೆ. ಶಾರೀರಕವಾಗಿ ಯಾವ ಕೆಲಸವನ್ನು ಮಾಡದೇ ಇರುವುದನ್ನು **ಬ್ರಹ್ಮಯೋಗವೆಂದೂ,** ಶಾರೀರಕವಾಗಿ ಮಾಡಿದರೂ ಮಾಡದಂತಿದ್ದರೂ, ಮಾನಸಿಕವಾಗಿ ಮಾಡದಂತೆ ಇರುವುದನ್ನು **ಕರ್ಮ ಯೋಗವೆಂದೂ** ಸಹ ಹೇಳಿದ್ದಾನೆ.

ಆತ್ಮ ಬೋಧಿಸಿದ ಆ ಎರಡು ವಿಧಾನಗಳನ್ನು ಮನುಷ್ಯ ಮರೆತು ಹೋದರೂ, ಈದಿನ ದೈವ ಗ್ರಂಥದಲ್ಲಿ ಎಲ್ಲರಿಗೂ ತಿಳಿಯುವಂತೆ ಬರೆದು ಇಡಲಾಗಿದೆ. ಆದರೂ ಮನುಷ್ಯ ದೈವಗ್ರಂಥಗಳನ್ನು ನೋಡದಂತೆ ಇದ್ದಾನೆ. ಒಂದು ವೇಳೆ ನೋಡಿದರೂ ಅದರಲ್ಲಿ ಹೇಳಿದ ವಿಧಾನವನ್ನು ಗ್ರಹಿಸಲಾರದಂತೆ ಇದ್ದಾನೆ. ಆದ್ದರಿಂದ ನಿಜ ಜೀವನದಲ್ಲಿ ಕರ್ಮ ಎಂಬ ಸಾಲವನ್ನು ಜಯಿಸುವ ಅಥವ ತೀರಿಸುವ ವಿಧಾನವನ್ನು ತಿಳಿಯದೇ ಎಂದಿಗೂ ಆತ್ಮನಿಗೆ ಸಾಲಗಾರನಾಗಿಯೇ ನಿಂತಿದ್ದಾನೆ. ಕರ್ಮ ಎನ್ನುವ ಸಾಲ ತೀರುವವರೆಗು ನಿಯಮದ ಪ್ರಕಾರ ಆತ್ಮ ಎಲ್ಲಿಗೆ ಹೋದರೇ ಜೀವಾತ್ಮವೂ ಸಹ ಅಲ್ಲಿಗೆ ಹೋಗಬೇಕಾಗಿದ್ದೆ. ಕಥೆಯಲ್ಲಿ ಹೇಳಿದಂತೆ ಆತ್ಮ ಹೇಗೆ ಆಡಿಸಿದರೇ ಹಾಗೆ ಜೀವಿಯು ಆಡಬೇಕಾಗಿದ್ದೇ. ಹಾಗೆಯೇ ಏನು ಕೊಟ್ಟರೇ ಅದನ್ನೇ ತಿನ್ನಬೇಕಾಗಿದ್ದೆ ಅಥವಾ ಅನುಭವಿಸಬೇಕಾಗಿದ್ದೆ. ಕರ್ಮ ತೀರುವವರೆಗು ಜೀವಿಯ ಇಷ್ಟದ ಪ್ರಕಾರ ಯಾವುದೂ ನಡೆಯುವುದಿಲ್ಲ. ಎಲ್ಲಾ ಆತ್ಮದ ಇಷ್ಟಪ್ರಕಾರವೇ ನಡೆಯುತ್ತದೆ. ಜೀವಿಗೆ ಕರ್ಮ ಎಂಬ ಸಾಲ ತೀರುವವರೆಗೂ ಸ್ವತಂತ್ರ ಇರುವುದಿಲ್ಲ ಎಂದರೆ ಮೋಕ್ಷ ಇರುವುದಿಲ್ಲ.

ಜೀವಯ ಕರ್ಮ ಎಂಬ ಸಾಲ ತೀರುವವರೆಗೂ ಆತ್ಮ ತಾನಿರುವ ಶರೀರವನ್ನು ಬಿಟ್ಟು ಯಾವ ಶರೀರವನ್ನು ಸೇರುತ್ತದೋ ಜೀವಿಯೂ ಸಹ ಆತ್ಮದ ಹಿಂದೆ ಪ್ರಯಾಣಿಸುತ್ತಾ ಆತ್ಮ ಬಿಟ್ಟ ಶರೀರವನ್ನು ಬಿಟ್ಟು ಆತ್ಮ ಸೇರಿದ ಶರೀರದೊಳಗೆ ಸೇರುತ್ತಿದ್ದಾನೆ. ಆತ್ಮ 'ಕರ್ಮ' ಎಂಬ ಸಾಲದಿಂದ ಜೀವಾತ್ಮನನ್ನು ತನ್ನ ಆಧೀನದಲ್ಲಿ ಇಟ್ಟುಕೊಂಡಿರುವುದರಿಂದ ಆತ್ಮ ಎಲ್ಲಿಗೆ ಹೋಗುತ್ತದೋ, ಆತ್ಮದ ಹಿಂದೆ ಅಲ್ಲಿಗೆ ಜೀವಾತ್ಮವೂ ಸಹ ಹೋಗಬೇಕಾಗಿರುತ್ತದೆ. ಈ

ವಿಧಾನವೆಲ್ಲವೂ ಸೃಷ್ಟಿ ಆದಿಯಲ್ಲಿಯೇ ಧರ್ಮಯುಕ್ತವಾಗಿ ಏರ್ಪಡಿಸಲಾಗಿದೆ. ಆತ್ಮ ಹಿಂದೆ ಜೀವಾತ್ಮ ಹೋಗುವುದರಿಂದ ಈ ಎರಡು ಆತ್ಮಗಳನ್ನು ಜೋಡಿ ಆತ್ಮಗಳೆಂದು ಕರೆಯುತ್ತಿದ್ದೇವೆ. ಒಂದುವೇಳೆ ಜೀವಾತ್ಮ ಹಿಂದೆ ಆತ್ಮ ಹೋದರೂ, ಆತ್ಮ ಹಿಂದೆ ಜೀವಾತ್ಮ ಹೋದರೂ ಅದನ್ನು ಮರಣ ಎನ್ನುತ್ತಿದ್ದೇವೆ. ಶರೀರವನ್ನು ಬಿಟ್ಟು ಆತ್ಮ ಹಿಂದೆ ಜೀವಾತ್ಮ ಹೋದರೇ ಅದನ್ನು **'ಕಾಲಮರಣ'** ಎನ್ನುತ್ತಿದ್ದೇವೆ. ಯಾವಾಗಾದರೂ ಒಂದುಬಾರಿ ಶರೀರವನ್ನು ಬಿಟ್ಟು ಜೀವಾತ್ಮ ಮೊದಲು ಹೋದರೂ, ಅದರಹಿಂದೆ ಆತ್ಮ ಹೋದರೂ ಅದು ಮರಣವೇ ಆದರೆ, ಅದನ್ನು ಪ್ರತ್ಯೇಕಿಸಿ **'ಅಕಾಲಮರಣ'** ಎನ್ನುತ್ತಿದ್ದೇವೆ. ಕಾಲಮರಣಕ್ಕೂ ಅಕಾಲ ಮರಣಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಅದು ಆತ್ಮ ಜೀವಾತ್ಮಗಳ ಗಮನವನ್ನು ಅನುಸರಿಸಿ ಇರುತ್ತದೆ. ಶರೀರದಿಂದ ಮೊದಲು ಆತ್ಮ ಬಂದು ಅದರಹಿಂದೆ ಜೀವಾತ್ಮ ಬಂದರೇ ಅದನ್ನು ಕಾಲಮರಣವೆಂದೂ, ಹಾಗೆಯೇ ಮೊದಲು ಜೀವಾತ್ಮ ಬಂದು ಅದರ ಹಿಂದೆ ಆತ್ಮ ಬಂದರೇ ಅದನ್ನು ಅಕಾಲಮರಣವೆಂದು ಹೇಳಬಹುದು. ಆದರೇ ಈದಿನ ಯಾವುದು ಕಾಲಮರಣವೋ, ಯಾವುದು ಅಕಾಲಮರಣವೋ ಯಾರೂ ಹೇಳಲಾಗದೇ ಹೋಗುತ್ತಿದ್ದಾರೆ.

ಅಕಾಲ ಮರಣದವೊಂದರ ವಿಷಯವನ್ನು ನಂತರ ವಿವರಿಸಿಕೊಳ್ಳೋಣ. ಈಗ ಕಾಲಮರಣವೊಂದರ ಪೂರ್ತಿ ವಿಷಯವನ್ನು ತಿಳಿದುಕೊಳ್ಳೋಣ. ಜನನದಿಂದ ಮನುಷ್ಯನ ಜೀವನ ಪ್ರಾರಂಭವಾಗುತ್ತಿದೆ. ಹಾಗೆಯೇ ಮರಣದಿಂದ ಮನುಷ್ಯನ ಜೀವನ ಮುಗಿಯುತ್ತಿದೆ. ಜನನ ಮರಣ ಮಧ್ಯಕಾಲವನ್ನು ಜೀವನ ಎನ್ನುತ್ತಿದ್ದೇವೆ. ಜೀವನಕ್ಕೆ ಆದಿ ಅಂತ್ಯಗಳು ಎರಡೂ ಮನುಷ್ಯ ಜೀವನಕ್ಕೆ ಎಲ್ಲೆ(ಹದ್ದು)ಗಳಂತಹವು. ಎರಡು ಹದ್ದುಗಳ ಮಧ್ಯದಲ್ಲಿ ಜೀವನ ಸಾಗುತ್ತಿದೆ. ಶರೀರದೊಳಕ್ಕೆ ಆತ್ಮ ಮತ್ತು ಆತ್ಮದೊಂದಿಗೆ ಜೀವಿಯೂ ಪ್ರವೇಶಿಸುವುದನ್ನು ಜನನ ಅಥವಾ ಜನ್ಮ ಎನ್ನುತ್ತಿದ್ದೇವೆ. ಆತ್ಮ ಎಲ್ಲಿಗೆ ಹೋಗುತ್ತದೊ ಅಲ್ಲಿಗೆ ಜೀವಾತ್ಮ ಹೋಗುವುದು ಸಹಜವೆ. ಏಕೆಂದರೇ ಎರಡು ಆತ್ಮಗಳೂ ಜೋಡಿ ಆತ್ಮಗಳಾಗಿವೆ. ಮನುಷ್ಯ ಹೊರಗಿನ ಪ್ರಪಂಚದಲ್ಲಿ ಹಿಂದೂವಾಗಿಯೂ

ಇರಬಹುದು, ಮುಸ್ಲಿಮ್‌ಆಗಿ ಆದರೂ ಇರಬಹುದು ಅಥವಾ ಕ್ರೈಸ್ತನಾಗಿಯೂ ಸಹ ಇರಬಹುದು. ಹೊರಗೆ ಯಾವ ಮತದಲ್ಲಿರುವವನಿಗಾದರೂ ಶರೀರ ಯಂತ್ರಾಂಗವೆಲ್ಲವೂ ಒಂದೇ ವಿಧವಾಗಿ ಇರುತ್ತದೆ. ಹೊರಗೆ ಶರೀರವೆಲ್ಲವೂ ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳೆಂಬ ಹತ್ತು ಇಂದ್ರಿಯಗಳಿಂದ ಕೂಡಿಕೊಂಡಿರುವುದಾಗಿ, ಒಳಗಿನ ಯಂತ್ರಾಂಗವೆಲ್ಲವೂ ಜೀವಿಯೊಂದಿಗೂ ಸಹ ಹದಿನೈದು ಭಾಗಗಳ ನಿರ್ಮಾಣವಾಗಿ, ಒಟ್ಟು 25 ಭಾಗಗಳ ಶರೀರ ನಿರ್ಮಾಣವು ಎಲ್ಲರಿಗೂ ಇದೆ. ಎಲ್ಲ ಮಾನವ ಶರೀರಗಳು ಒಂದೇ ಧರ್ಮವನ್ನು, ಒಂದೇ ವಿಧಾನವನ್ನು ಹೊಂದಿವೆ. ಆದ್ದರಿಂದ ಸಾವಾಗಲೀ, ಹುಟ್ಟುವಿಕೆಯಾಗಲೀ ಎಲ್ಲರಿಗೂ ಸಮಾನ ಅನುಭವವಾಗಿ ಇದೆ. ಒಬ್ಬನಿಗೆ ಮರಣ ಹೇಗೆ ಉಂಟಾಗುತ್ತಿದೆಯೋ ಉಳಿದ ಮನುಷ್ಯರೆಲ್ಲರಿಗೂ ಅದೇ ರೀತಿಯಾಗಿ ಮರಣ ಉಂಟಾಗುತ್ತಿದೆ. ಸರ್ವ ಮಾನವರಿಗೂ ದೇವರು ಒಬ್ಬನೇ ಆಗಿರುವುದರಿಂದ ಎಲ್ಲರಿಗೂ ಸಾವು ಹುಟ್ಟುಗಳೂ ಸಹ ಒಂದೇ ರೀತಿಯಾಗಿ ಇವೆ. ಜನನ ಮರಣಗಳು ಎರಡೂ ಎಂದಿಗೂ ಬದಲಾಗದ ಸಿದ್ಧಾಂತ ರೂಪವಾಗಿ ಇವೆ.

ಮನುಷ್ಯನ ಶರೀರದಲ್ಲಿ 24 ಭಾಗಗಳು ಪ್ರಕೃತಿ ಸಂಬಂಧವಾಗಿ ಇರುವಾಗ, 25ನೇ ಭಾಗ ಆತ್ಮ ಸಂಬಂಧ ಜೀವಿಯಾಗಿ ಇದ್ದಾನೆ. 24 ಭಾಗಗಳು ಪ್ರಕೃತಿಯೊಂದಿಗೆ ತಯಾರಾಗಿರುವಾಗ, ಜೀವಿಯು ಆತ್ಮ ಸಂಬಂಧವಾಗಿ ಇದ್ದಾನೆ. ಜೀವಿಯೊಂದಿಗೆ ಆತ್ಮವೂ ಸಹ ಇದೆ. ಆತ್ಮವೇ ಅಲ್ಲದೇ ಪರಮಾತ್ಮವೂ ಸಹ ಶರೀರದಲ್ಲೇ ಇದೆ. ಈ ಪ್ರಕಾರ ಮೂರು ಆತ್ಮಗಳೂ, 24 ಪ್ರಕೃತಿ ಭಾಗಗಳೂ ಒಟ್ಟು 27 ಭಾಗಗಳಾಗಿ ಶರೀರವಿದೆ. ಆದರೇ ಪ್ರಕೃತಿ ಗುಣಗಳಲ್ಲಿ ಜೀವಿಯು ಇರುವುದರಿಂದ ಮತ್ತು ಕರ್ಮದಿಂದ ಬಂಧಿಸಲ್ಪಟ್ಟು ಅದರ ಪ್ರಭಾವದಲ್ಲಿ ಜಿವಿಯು ಗುಣಚಕ್ರದಲ್ಲಿ ಬಂಧೀಯಾಗಿರುವುದರಿಂದ ಆತನನ್ನು ಶರೀರ ಭಾಗವಾಗಿ ಲೆಕ್ಕಿಸಬೇಕಾಗಿ ಬಂದಿದೆ. ಉಳಿದ ಆತ್ಮ, ಪರಮಾತ್ಮಗಳು ಎರಡೂ ಒಂದು ಕಡೆ ಇಲ್ಲದಂತೆ ಒಂದುಭಾಗ ಅಲ್ಲದಂತೆ ಶರೀರವೆಲ್ಲಾ ವ್ಯಾಪಿಸಿರುವುದರಿಂದ ಆ ಎರಡನ್ನೂ ಶರೀರ ಭಾಗಗಳಾಗಿ

ಲೆಕ್ಕಿಸುತ್ತಿಲ್ಲ. ಇದರ ಪ್ರಕಾರ ಮೂರು ಅತ್ಮಗಳಲ್ಲಿ ಒಂದು ಜೀವಾತ್ಮ ಶರೀರ ಭಾಗಗಳಲ್ಲಿ ಸೇರಿಹೋಗಿ ಶರೀರ ಭಾಗಗಳು ಒಟ್ಟು 25 ಎಂದು ಹೇಳಲಾಗುತ್ತಿವೆ. ಉಳಿದ ಆತ್ಮ ಪರಮಾತ್ಮರು ಎರಡೂ ಶರೀರಕ್ಕೆ ಅತೀತವಾಗಿರುವವುಗಳಾಗಿ ಲೆಕ್ಕಿಸುತ್ತಿದ್ದೇವೆ. ಎಷ್ಟುಮಾತ್ರ ಪ್ರಕೃತಿಯೊಂದಿಗೆ ಯಾವುದೇ ಸಂಬಂಧವೂ ಇಲ್ಲದಂತಿರುವುದರಿಂದ ಎರಡು ಆತ್ಮಗಳನ್ನೂ ಪವಿತ್ರ ಆತ್ಮಗಳಾಗಿ ಹೇಳಬಹುದು. ಅಷ್ಟೇ ಅಲ್ಲದೇ ಆತ್ಮ ಶರೀರವೆಲ್ಲಾ ವ್ಯಾಪಿಸಿರುವುದರಿಂದ ಮತ್ತು ಪರಮಾತ್ಮ ಶರೀರದೊಳಗೂ, ಶರೀರದ ಹೊರಗೂ ಎಲ್ಲಾ ಅಣುಅಣುವಿನಲ್ಲೂ ವ್ಯಾಪಿಸಿರುವುದರಿಂದ ಶರೀದೊಳಗೆ ದೇವರು ಆತ್ಮ ಎಂದೂ, ಶರೀರದ ಹೊರಗೆ ದೇವರು ಪರಮಾತ್ಮ ಎಂದೂ ಹೇಳಬಹುದು. ಅಷ್ಟೇ ಅಲ್ಲದೇ ಚರ ಪ್ರಕೃತಿಗೆ ದೇವರು ಆತ್ಮ ಎಂದೂ, ಅಚರ ಪ್ರಕೃತಿಗೆ ದೇವರು ಪರಮಾತ್ಮ ಎಂದೂ ಹೇಳಬಹುದು. ಪ್ರಪಂಚವೆಲ್ಲಾ ಆವರಿಸಿ ಶರೀರಗಳನ್ನೂ ಸಹ ತನ್ನಲ್ಲಿಯೇ ಲೀನ ಮಾಡಿಕೊಂಡ ಪರಮಾತ್ಮ ದೊಡ್ಡ ದೇವರಾಗಿ ಹೇಳಬಹುದು. ಶರೀರದಲ್ಲಿ ಮಾತ್ರ ಆವರಿಸಿದ ಆತ್ಮವನ್ನು ಚಿಕ್ಕ ದೇವರಾಗಿ ಹೇಳಬಹುದು. ಒಟ್ಟು ಪ್ರಕೃತಿಯೆಲ್ಲವನ್ನೂ ಆವರಿಸಿ, ಜೀವಾತ್ಮ ಆತ್ಮಗಳಿಗೂ ಸಹ ಅಧಿಪತಿಯಾಗಿ, ಅವರಲ್ಲಿಯೂ ಇರುವ ಪರಮಾತ್ಮ ಎಂಬ ದೇವರು ಎಲ್ಲರಿಗಿಂತ ದೊಡ್ಡವನಾದ್ದರಿಂದ ಆತನನ್ನು "ಬ್ರಹ್ಮ" ಎಂದು ಅಂದಿದ್ದಾರೆ. ಬ್ರಹ್ಮ ಎಂದರೇ ದೊಡದ್ದು ಎಂದು ಅರ್ಥ. ಬ್ರಹ್ಮ ಎಂದರೇ ವಿಷ್ಣು, ಈಶ್ವರ, ಬ್ರಹ್ಮ ಎಂಬ ಮೂರು ಹೆಸರುಗಳಿರುವ ತ್ರಿಮೂರ್ತಿಗಳಲ್ಲಿ ಬ್ರಹ್ಮ ಎಲ್ಲರಿಗೂ ನೆನಪಿಗೆ ಬರಬಹುದು. ಆದರೇ ತ್ರಿಮೂರ್ತಿಗಳಲ್ಲಿ ಬ್ರಹ್ಮ ಬೇರೆ, ಪರಮಾತ್ಮನಾಗಿ ಹೇಳಲಾಗುವ ಬ್ರಹ್ಮ ಬೇರೆಯೆಂದು ತಿಳಿಯಬೇಕು. ಪ್ರಪಂಚದಲ್ಲಿ ಆತನಿಗಿಂತ ಮೀರಿದವರು ಇಲ್ಲ, ಆದ್ದರಿಂದ ಆತನನ್ನೇ ದೊಡ್ಡದಾಗಿ ಹೇಳುವುದು ನಡೆದಿದೆ. ಶರೀರವೆಲ್ಲವೂ ವ್ಯಾಪಿಸಿದ ಆತ್ಮ ಶರೀರದಲ್ಲಿ ದೇವರಾಗಿ ಲೆಕ್ಕಿಸಲಾಗಿದ್ದರೂ ಆತ್ಮಕ್ಕೆ "ಬ್ರಹ್ಮ" ಎಂಬ ಹೆಸರು ಇಲ್ಲ.

ಜೀವಾತ್ಮಕ್ಕೆ ಆತ್ಮದೊಂದಿಗೆ ಹೊರತುಪಡಿಸಿ ಪರಮಾತ್ಮದೊಂದಿಗೆ ಸಂಬಂಧವಿಲ್ಲ. ಪರಮಾತ್ಮನಿಗೆ ಆತ್ಮದೊಂದಿಗೆ ಹೊರತು ಜೀವಾತ್ಮದೊಂದಿಗೆ

ಸಂಬಂಧವಿಲ್ಲ. ಆದರೇ ಆತ್ಮಕ್ಕೆ ಮಾತ್ರ ಇತ್ತ ಜೀವಾತ್ಮದೊಂದಿಗೂ, ಅತ್ತ ಪರಮಾತ್ಮದೊಂದಿಗೂ ಎರಡೂಕಡೆ ಸಂಬಂಧವಿರುತ್ತದೆ. ಜೀವಾತ್ಮಕ್ಕೂ ಪರಮಾತ್ಮಕ್ಕೂ ಮಧ್ಯದಲ್ಲಿ ಅನುಸಂಧಾನಕರ್ತನಾಗಿ ಮಧ್ಯವರ್ತಿಯಾಗಿ ಆತ್ಮ ಇದೆ. ಜೀವಾತ್ಮ ದೇವರಾದ ಪರಮಾತ್ಮನನ್ನು ಸೇರಬೇಕೆಂದರೇ ಆತ್ಮ ಮೂಲಕವೇ ಸೆರಬೇಕಾಗಿರುತ್ತದೆ. ಆದ್ದರಿಂದ ಒಂದು ದೈವಗ್ರಂಥದಲ್ಲಿ **"ನನ್ನ ಮೂಲಕ ಹೊರತು ಯಾರೂ ದೇವರ ಹತ್ತಿರಕ್ಕೆ ಹೋಗಲಾರನು"** ಎಂದು ಹೇಳಿದ್ದಾನೆ. ಜೀವಾತ್ಮಕ್ಕೆ ಆತ್ಮ ತಂದೆ ಆದಾಗ, ಆತ್ಮಕ್ಕೆ ಪರಮಾತ್ಮ ತಂದೆಯಾಗಿ ಹೇಳಲ್ಪಡುತ್ತಿದ್ದಾನೆ. ಆದ್ದರಿಂದ ಮಧ್ಯ ದೈವಗ್ರಂಥದಲ್ಲಿ ಆತ್ಮ ಹೀಗೆ ಹೇಳಿದೆ. **"ನಾನು ಮತ್ತು ನನ್ನ ತಂದೆ ಏಕವಾಗಿ ಇದ್ದೇವೆ."** ಆತ್ಮ ಶರೀರವೆಲ್ಲಾ ವ್ಯಾಪಿಸಿರುವಾಗ, ಪರಮಾತ್ಮವೂ ಸಹ ಶರೀರವೆಲ್ಲಾ ವ್ಯಾಪಿಸಿರುವುದರಿಂದ **"ನಾನೂ ನನ್ನ ತಂದೆಯಾದ ಪರಮಾತ್ಮನಲ್ಲಿ ಬೆರೆತಿದ್ದೇನೆಂದು"** ಆತ್ಮ ಹೇಳುವುದು ನಡೆದಿದೆ. ಕಾಣಿಸುವ ಮನುಷ್ಯ ಆ ಮಾತನ್ನು ಹೇಳಿದರೂ ಆ ಮಾತು ಆತ್ಮ ಹೇಳಿದೆಯೆಂದು ಅರ್ಥವಾಗುತ್ತಿದೆ. ಜೀವಿಗೆ ಶರೀರದಲ್ಲಿರುವ ಆತ್ಮವೇ ದೇವರು. ಜೀವಿಯು ಶರೀರದಲ್ಲೇ ಇದ್ದಾನೆ, ಶರೀರದಲ್ಲೇ ಇರುತ್ತಾ ಆತ್ಮದೊಂದಿಗೆ ಸಂಬಂಧಪಟ್ಟಿದ್ದಾನೆ. ಜೀವನಿಗೆ ಪರಮಾತ್ಮದೊಂದಿಗೆ ಯಾವುದೇ ಸಂಬಂಧವಿಲ್ಲ. ಜೀವಿಯನ್ನು ಆಡಿಸುವವನು, ಅನುಭವಿಸುವಂತೆ ಮಾಡುವವನು, ಇತರ ಶರೀರಗಳಲ್ಲಿ ಜನ್ಮಿಸುವಂತೆ ಮಾಡುವವನು ಎಲ್ಲವೂ ಆತ್ಮವೇ. ಅಷ್ಟೇ ಅಲ್ಲದೆ ಜೀವಿಯನ್ನು ದೇವರ ಹತ್ತಿರಕ್ಕೆ ಸೇರಿಸಿ ಮೋಕ್ಷವನ್ನು ಹೊಂದಿಸುವವನೂ ಸಹ ಆತ್ಮವೇ. ಆದ್ದರಿಂದ ಪ್ರಪಂಚಕ್ಕೆಲ್ಲಾ ದೊಡ್ಡವನಾದ ದೇವರಾಗಿದ್ದ ಪರಮಾತ್ಮದೊಂದಿಗೆ ಜೀವಿಗೆ ಯಾವ ಸಂಬಂಧವಿಲ್ಲ. ಜೀವಿಯು ಆತ್ಮದೊಂದಿ ಗೆಯೇ ಸಂಬಂಧ ಹೊಂದಿರುವುದರಿಂದ **ಜೀವಿಗೆ ಆತ್ಮವೇ ದೇವರು, ಆತ್ಮವೇ ಮಾರ್ಗ, ಆತ್ಮವೇ ಗಮ್ಯ.** ಆದ್ದರಿಂದ ಮಧ್ಯ ದೈವಗ್ರಂಥದಲ್ಲಿ ಆತ್ಮ **"ನಾನೇ ಮಾರ್ಗ, ನಾನೇ ಗಮ್ಯ"** ಎಂದು ಹೇಳಿದೆ. ಈ ರೀತಿ ಎಲ್ಲವೂ ಗಮನಿಸಿದರೇ ಶರೀರದಲ್ಲಿ ಜೀವಿಯೊಂದರ ಸ್ಥಿತಿ ಏನು? ಎಂದು ತಿಳಿಯಬಲ್ಲದು. ಅಷ್ಟೇ

ಅಲ್ಲದೇ ಕರ್ಮಕ್ಕೆ ಅತೀತವಾಗಿ ಪ್ರಕೃತಿಗೆ ಅತೀತವಾಗಿರುವ ಆತ್ಮ ಪರಮಾತ್ಮರ ವಿಷಯವೂ ಸಹ ಸ್ವಲ್ಪ ಅರ್ಥವಾಗಬಲ್ಲದು.

ಶರೀರದಲ್ಲಿ ಜೀವಾತ್ಮನಿಗೆ ಗತಿಯಾಗಿ, ಪತಿಯಾಗಿ ಎಲ್ಲವೂ ತಾನಾಗಿರುವ ಆತ್ಮ ಜೀವಿಗೆ ಯಮನಾಗಿಯೂ ಇದೆ. ಕರ್ಮಕ್ಕೆ ತಕ್ಕ ಶಿಕ್ಷೆಯನ್ನು ಜೀವಿಗೆ ವಿಧಿಸುವುದಲ್ಲದೇ, ಒಂದು ಶರೀರದಲ್ಲಿ ಪ್ರಾರಬ್ಧಕರ್ಮ ಮುಗಿದ ಕೂಡಲೇ ಜೀವಿಯು ಮರಣ ಹೊಂದುವಂತೆ ಮಾಡಿ ಎರಡನೆಯ ಜನ್ಮಕ್ಕೆ ತೆಗೆದುಕೊಂಡು ಹೋಗುತ್ತಿದೆ. ಜೀವಿಯ ಶರೀರದಿಂದ ಆತ್ಮ ತನ್ನ ಜೊತೆಗೆಯೇ ಶರೀರದ ಹೊರಗೆ ತಂದುಕೊಳ್ಳುವುದು ಮರಣವಾದರೇ, ಹೊರಗೆ ತಂದ ಜೀವಿಯನ್ನು ಮರುಜನ್ಮಕ್ಕೆ ತೆಗೆದುಕೊಂಡು ಹೋಗುವುದನ್ನು ಜನನ ಎನ್ನುತ್ತಿದ್ದೇವೆ. ಜನನ ಪ್ರತಿ ಜೀವಿಗೂ ಯಾವುದೇ ತಡವಿಲ್ಲದೇ ನಡೆಯುತ್ತಿದೆ. ಒಬ್ಬ ಮನುಷ್ಯ ಸತ್ತುಹೋದ ಕ್ಷಣವೇ ಶರೀರದಲ್ಲಿನ ಜೀವಿಯನ್ನು ಆತ್ಮ ತನ್ನ ಹಿಂದೆಯೇ ತೆಗೆದುಕೊಂಡು ಹೋಗಿ ಬೇರೆ ಶರೀರದಲ್ಲಿ ಪ್ರವೇಶಿಸುತ್ತಿದೆ. ಹಾಗೆ ತಡವಿಲ್ಲದೇ ಮರಣದ ಹಿಂದೆಲೇ ಜನನ ನಡೆಯುತ್ತಿದ್ದರೂ ಅದು ಯಾರಿಗೂ ಕಾಣಿಸುವ ವಿಷಯವಲ್ಲ, ಆದ್ದರಿಂದ ಆ ವಿಷಯ ಯಾರಿಗೂ ತಿಳಿಯದಂತೆ ಹೋಗಿದೆ. ಆತ್ಮ ಶರೀರವೆಲ್ಲದಕ್ಕೂ ಅಧಿಪತಿಯಾಗಿ ಇದೆ. ಆದ್ದರಿಂದ ಶರೀರದಲ್ಲಿನ ಜೀವಿಗೂ ಸಹ ದೇವರಾಗಿ ಇದೆ. ಆತ್ಮ ಶರೀರದಿಂದ ಯಾವಾಗ ಹೊರಗೆ ಬಂದಿದೆಯೋ, ಆಗಲೇ ಜೀವಿಯೂ ಹೊರಗೆ ಬರುವುದರಿಂದ ಅದು ಮೃತದೇಹವಾಗಿ ಹೋಗಿದೆ. ಆತ್ಮ ಮತ್ತು ಜೀವಾತ್ಮ ಎರಡೂ ಶರೀರವನ್ನು ಬಿಟ್ಟು ಹೊರಗೆ ಬಂದಾಗ, ಮೂರನೆಯದಾದ ಪರಮಾತ್ಮ ಎಲ್ಲವೂ ವ್ಯಾಪಿಸಿರುವವನಾದ್ದರಿಂದ ಆತನು (ದೇವರು) ಸತ್ತುಹೋದ ಶರೀರದಲ್ಲಿಯೂ ಸಹ ಇದ್ದಾನೆ. ಮೂರು ಆತ್ಮಗಳಲ್ಲಿ ಎರಡು ಆತ್ಮಗಳು ಶರೀರವನ್ನು ಬಿಟ್ಟಾಗ, ಪ್ರಪಂಚವೆಲ್ಲದಕ್ಕೂ ದೇವರಾದ ಪರಮಾತ್ಮ ಎಲ್ಲಿಗೂ ಹೋಗದವನಾಗಿ, ಎಲ್ಲಾ ಕಡೆಯೂ ಇರುವವನಾಗಿ ಶರೀರದಲ್ಲಿ ನಿಂತುಹೋಗಿದ್ದಾನೆ. ಶರೀರಕ್ಕೆ ಅಧಿಪತಿ, ಶರೀರವನ್ನು ರಕ್ಷಿಸುವವನಾದ ಆತ್ಮ ಇಲ್ಲವಾದ್ದರಿಂದ ಶರೀರ ನಾಶವಾಗುವುದಕ್ಕೆ

ಪ್ರಾರಂಭಿಸುತ್ತದೆ. ಮನುಷ್ಯ ಸತ್ತುಹೋದ ನಂತರ ಶರೀರ ಕೊಳೆತುಹೋಗುವುದಕ್ಕೆ, ಕೆಟ್ಟುಹೋಗುವುದಕ್ಕೂ ಪ್ರಾರಂಭವಾಗುತ್ತದೆ. ಆದ್ದರಿಂದ ಸತ್ತುಹೋದ ಮನುಷ್ಯನ ಶರೀರವನ್ನು ಸುಟ್ಟುಹಾಕುವುದೋ, ಹೂತಿಡುವುದೋ ನಡೆಯುತ್ತದೆ. ಆರ್ಥಿಕ ಸಾಮರ್ಥ್ಯ ಇರುವವರು ಹಣ ಖರ್ಚು ಮಾಡಿ ಮೃತ ಶರೀರವನ್ನು ಸುಟ್ಟು ಹಾಕಿದರೆ, ಹಣ ಇಲ್ಲದವರು ಮಣ್ಣಿನಲ್ಲಿ ಹೂತಿಡುವುದು ನಡೆಯುತ್ತಿದೆ.

ಮನುಷ್ಯ ಸತ್ತುಹೋದ ನಂತರ ಮೃತ ಶರೀರದಲ್ಲಿ ಮೊದಲು ಕೆಟ್ಟುಹೋಗಿ ಕೊಳೆಯುವುದಕ್ಕೆ ಆರಂಭಿಸುವವು ಹೊಟ್ಟೆಯಲ್ಲಿನ ಕರಳುಗಳು. ಆದ್ದರಿಂದ ಸತ್ತುಹೋದ ಶರೀರ ಕೆಲವು ಗಂಟೆಗಳಿಗೇ ದುರ್ವಾಸನೆ ಬರುವುದಕ್ಕೆ ಆರಂಭವಾಗುತ್ತದೆ. ಅದಕ್ಕಾಗಿ ಸತ್ತು ಹೋದ ಶರೀರವನ್ನು ಎಷ್ಟು ಸಾಧ್ಯವಾದರೇ ಅಷ್ಟು ಬೇಗನೇ ಹೂತಿಡುವುದಕ್ಕೋ, ಸುಡುವುದಕ್ಕೋ ಪ್ರಯತ್ನಿಸುವರು. ಕೆಲವರು ಮತ ಅಭಿಪ್ರಾಯಗಳನ್ನು ಅಡ್ಡವಾಗಿ ಇಟ್ಟುಕೊಂಡು ಶವವನ್ನು ಹೂತಿಡುವುದೇ ವಿಧಿಯಾಗಿ ಇಟ್ಟುಕೊಂಡರೇ, ಕೆಲವರು ಸುಟ್ಟುಹಾಕುವುದೇ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಮುಖ್ಯವಾಗಿ ಕ್ರೈಸ್ತರು ಮತ್ತು ಮುಸ್ಲಿಮರು ಶವವನ್ನು ಹೂತಿಡುವುದೇ ವಿಧಿಯಾಗಿ ಇಟ್ಟುಕೊಂಡಿದ್ದಾರೆ. ಹಿಂದೂಗಳಲ್ಲಿ ಕೆಲವರು ಹೂತಿಟ್ಟರೆ ಕೆಲವರು ಸುಡುತ್ತಿದ್ದಾರೆ. ಹಿಂದೂಗಳಲ್ಲಿ ಒಂದೊಂದು ಪ್ರಾಂತದಲ್ಲಿ ಒಂದೊಂದು ನಿಯಮವಿದೆ. ಯಾವುದು ಏನಾದರೂ ಸತ್ತುಹೋದ ಶರೀರವನ್ನು ಹೆಚ್ಚಾಗಿ ಭೂಮಿಯಲ್ಲಿ ಹೂತಿಡುವುದು ನಡೆಯುತ್ತಿದೆ. ಸುಮಾರು ಶೇ. 20ರಷ್ಟು ಸುಟ್ಟುಹಾಕುವುದು ನಡೆಯುತ್ತಿದೆ. ಸುಟ್ಟಿರುವ ಶರೀರ ಒಂದು ಗಂಟೆಯಲ್ಲಿ ಪೂರ್ತಿ ಸುಟ್ಟು ಹೋದರೇ, ಹೂತಿಟ್ಟಿರುವ ಶರೀರ ಪೂರ್ತಿ ನಾಶವಾಗುವುದಕ್ಕೆ ಸುಮಾರು 6 ತಿಂಗಳ ಕಾಲ ಬೇಕಾಗುತ್ತದೆ. ಅಲ್ಲಿಗೆ ಶರೀರವೆಲ್ಲವೂ ಕಾಣಿಸದೇ ಮಣ್ಣಿನಲ್ಲಿ ಬೆರೆತುಹೋಗಿ, ಕೆಲವು ಮೂಳೆಗಳು ಮಾತ್ರ ಉಳಿದಿರುತ್ತವೆ. ಆ ಮೂಳೆಗಳು ಸಹ ಸುಮಾರು 6 ವರ್ಷಗಳಿಗೆ ಪೂರ್ತಿ ಕಾಣಿಸದಂತೆ ನಾಶವಾಗಬಲ್ಲವು. ಈ ರೀತಿ ಮನುಷ್ಯನ ಶರೀರ ಕೊನೆಗೆ ಅದರ ನಾಮ ರೂಪಗಳು ಇಲ್ಲದಂತೆ ಹೋಗುತ್ತಿದೆ. ಮನುಷ್ಯನ ಶರೀರ ಒಂದು ಜನ್ಮದಲ್ಲಿ

ಒಂದಿದ್ದರೆ, ಮರುಜನ್ಮದಲ್ಲಿ ಮತ್ತೊಂದಾಗಿ ಇರುತ್ತದೆ. ಜನ್ಮ ಜನ್ಮಕ್ಕೂ ಶರೀರಗಳು ಬದಲಾಗುತ್ತಿರುತ್ತದೆ. ಆದರೇ ಯಾವ ಜನ್ಮದೊಳಗೆ ಹೋದರೂ ಜೀವಿಯು ಅವನೊಂದಿಗೆ ಇರುವ ಆತ್ಮ ಬದಲಾಗುವುದಿಲ್ಲ. ಜೀವಿಯು (ಜೀವಾತ್ಮ) ಮತ್ತು ಆತ್ಮ ಎರಡೂ ಶರೀರದೊಳಗೇ ಇರುತ್ತವೆ. ಜೀವಿಯು ಶರೀರದಲ್ಲಿ ಒಂದು ಕಡೆ ಇರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿಕೊಂಡಿದೆ.

ಒಂದು ಜನ್ಮದಲ್ಲಿ ಒಂದು ಶರೀರದಲ್ಲಿ ವಾಸಿಸುವ ಜೀವಾತ್ಮ, ಆತ್ಮ ಶರೀರವನ್ನು ಬಿಟ್ಟಾಗ, ಬೇರೊಂದು ಹೊಸ ಶರೀರವನ್ನು ಆಶ್ರಯಿಸುತ್ತಿವೆ. ಒಂದು ಶರೀರವನ್ನು ಬಿಡುವುದಾಗಲೀ, ಮತ್ತೊಂದು ಶರೀರವನ್ನು ಸೇರುವುದಾಗಲೀ ಸ್ವತಃವಾಗಿ ಆತ್ಮ ಮಾಡುತ್ತಿರುವಾಗ, ಆತ್ಮವನ್ನು ಅನುಸರಿಸಿ ಜೀವಾತ್ಮ ಹೋಗುತ್ತಿದೆ ಆದರೆ, ಜೀವಾತ್ಮ ಸ್ವತಃವಾಗಿ ಆ ಕೆಲಸವನ್ನು ಮಾಡಲಿಲ್ಲ. ಜೀವಿಯು ಏನೂ ಕೈಲಾಗದವನು, ಎಲ್ಲಾ ಕೈಲಾದವನು ಮಾಡಿಸುವವನು ಆತ್ಮ ಮಾತ್ರವೇ ಎಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಆತ್ಮ ಜೀವಿಯನ್ನು ಆತನ ಕರ್ಮವನ್ನು ಮತ್ತು ಗುಣಗಳನ್ನು ತೆಗೆದುಕೊಂಡು ಶರೀರವನ್ನು ಮರಣ ಸಮಯದಲ್ಲಿ ಬಿಟ್ಟುಹಾಕುತ್ತಿದೆ. ಆತ್ಮ ಮತ್ತು ಜೀವಾತ್ಮದೊಂದಿಗೆ ಗುಣಗಳು ಕರ್ಮಗಳೊಂದಿಗೆ ಸಹ ಸುವಾಸನೆ ಗಾಳಿಯಲ್ಲಿ ಬೆರೆತುಹೋಗಿ ಕಾಣಿಸದೇ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣಿಸಿದಂತೆ ಪ್ರಯಾಣಿಸುತ್ತದೆ. ಈ ವಿಷಯವನ್ನು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಎಂಟನೇ ಶ್ಲೋಕದಲ್ಲಿ ಈ ರೀತಿ ಹೇಳಿದ್ದಾರೆ.

**ಶ್ಲೋ॥ 8. ಶರೀರಂ ಯ ದವಾಪ್ನೋತಿ ಯಚ್ಚಾ ಪ್ಯುತ್ಕ್ರಾಮ ತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿ ವಾಶಯಾತ್ ॥**

**ಭಾವಾರ್ಥ :–** "ಶರೀರದಲ್ಲಿ ಈಶ್ವರನಾದ ಆತ್ಮ ಶರೀರವನ್ನು ಬಿಟ್ಟು ಹೋಗುವಾಗ ತನ್ನ ಹಿಂದೆಯಿರುವ ಜೀವಿಯೊಂದಿಗೆ ಸಹ ಶರೀರ ಗೃಹದಲ್ಲಿರುವ ಗುಣಗಳನ್ನು, ಜೀವಿಯ ಕರ್ಮವನ್ನು ತೆಗೆದುಕೊಂಡು ಸುವಾಸನೆ ಗಾಳಿಯಲ್ಲಿ ಬೆರೆತು

ಕಾಣಿಸದಂತೆ ಇನ್ನೊಂದು ಕಡೆಗೆ ಪ್ರಯಾಣಿಸುವಂತೆ ಯಾರಿಗೂ ತಿಳಿಯದಂತೆ ಆತ್ಮ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣಿಸುತ್ತಿದೆ."

ಇಲ್ಲಿ ಜ್ಞಾನದೃಷ್ಟಿಯಿಂದ ನೋಡಿದಂತಾದರೇ ಮಾತುಗಳಿಂದ ತಿಳಿದಿರುವುದಕ್ಕಿಂತ ಹೆಚ್ಚಾಗಿ ತಿಳಿಯಬಲ್ಲದು. ಶರೀರವೆಲ್ಲವೂ ಹರಡಿರುವ ಆತ್ಮಕ್ಕೆ ಕೇಂದ್ರ ಬ್ರಹ್ಮನಾಡಿ. ಬ್ರಹ್ಮನಾಡಿ ಸ್ಥಾನದಲ್ಲಿ ಸೂಕ್ಷ್ಮವಾಗಿ ಆತ್ಮ ಇರುವಾಗ, ಬ್ರಹ್ಮನಾಡಿಯನ್ನು ಇರುಸಾಗಿ (ಆಧಾರ) ಮಾಡಿಕೊಂಡು ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳು ಇವೆ. ಗುಣಚಕ್ರದಲ್ಲಿ ಗುಣಗಳಿರುವಾಗ, ಕರ್ಮಚಕ್ರದಲ್ಲಿ ಕರ್ಮ ಇರುವಾಗ, ಗುಣಚಕ್ರದಲ್ಲಿಯೇ ಒಂದು ಭಾಗದಲ್ಲಿ ಜೀವಿಯು ಇರುತ್ತಾನೆ. ಈ ಚಕ್ರಗಳೆಲ್ಲವುಗಳಿಗು ಆಧಾರವಾಗಿ ಬ್ರಹ್ಮನಾಡಿಯಲ್ಲಿ ಆತ್ಮ ಇದ್ದು ಎಲ್ಲವನ್ನೂ ತೆಗೆದುಕೊಂಡು ಸೂಕ್ಷ್ಮವಾಗಿ ಕಾಣಿಸದಂತೆ ಪ್ರಯಾಣಿಸಿ ಹೊಸ ಶರೀರವನ್ನು ಸೇರುತ್ತಿದೆ. ಬ್ರಹ್ಮನಾಡಿ ಸೂಕ್ಷ್ಮವಾಗಿ ಹೇಗಿದೆಯೋ, ಹಾಗೆಯೇ ಕಾಲ, ಕರ್ಮ, ಗುಣಚಕ್ರಗಳು ಸೂಕ್ಷ್ಮವಾಗಿ ಹೇಗಿವೆಯೋ ಇದಕ್ಕು ಮೊದಲು ನಮ್ಮ ಗ್ರಂಥಗಳಲ್ಲಿ ಹೇಳಿದ್ದೇವೆ. ಆತ್ಮ, ಜೀವಿಯು, ಕರ್ಮ, ಗುಣಗಳು ಎಲ್ಲವೂ ಸೇರಿ ಒಂದು ಚೌಕಟ್ಟಾಗಿ (ಸಮುದಾಯವಾಗಿ) ಏರ್ಪಟ್ಟು ಅದರಲ್ಲಿ ಜೀವಿಯು ಬಂಧಿಸಲಾ ಗಿದ್ದು ಪ್ರಯಾಣಿಸುವುದನ್ನು ದೃಶ್ಯ ರೂಪವಾಗಿ ಹೇಗೆ ಇರುತ್ತಾನೋ ನಂತರ ನೋಡಬಹುದು.

ಈ ನಾಲ್ಕು ಚಕ್ರಗಳ ಸಮುದಾಯದಲ್ಲಿ ಜೀವಿಯು ಗುಣಚಕ್ರದಲ್ಲಿ ಬಂಧಿಸಲಾಗಿದ್ದು ಆತನ ಕರ್ಮ ಮತ್ತು ಆತನ ಗುಣಗಳು ಅವುಗಳೊಂದಿಗೆ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ವ್ಯಾಪಿಸಿದ ಆತ್ಮ ಮರಣದೊಂದಿಗೆ ಹೊರಗೆ ಬಂದು ಜೀವಿಯು ಸೇರಬೇಕಾದ ಹೊಸ ಶರೀರದವರೆಗೂ ತೆಗೆದುಕೊಂಡು ಹೋಗುತ್ತಿದೆ. ಕಾಲ ಮರಣದಲ್ಲಿ ಇದೇ ನಡೆಯುತ್ತಿದೆ.

ಒಬ್ಬ ಮನುಷ್ಯ ಸತ್ತುಹೋದರೇ ಆ ಶರೀರದಲ್ಲಿನ ಜೀವಿಯು ಅದೇ ಕ್ಷಣವೇ ತನ್ನ ಆತ್ಮದೊಂದಿಗೆ ಸೇರಿ ಬೇರೊಂದು ಹೊಸ ಶರೀರವನ್ನು ಸೇರಿದಾಗ, ಆತನು ಬಿಟ್ಟ ಶರೀರವು ಕ್ರಮೇಣವಾಗಿ ಕೊಳೆತುಹೋಗುತ್ತಾ 6 ತಿಂಗಳುಗಳಿಗೆ




**ಬ್ರಹ್ಮ, ಕಾಲ, ಕರ್ಮ, ಗುಣಚಕ್ರ ಚಿತ್ರದಲ್ಲಿ**

ಪೂರ್ತಿ ಇಲ್ಲದಂತಾಗುತ್ತದೆ. ಒಂದು ವೇಳೆ ಮೂಳೆಗಳು ಉಳಿದರೂ ಅವೂ ಸಹ ಸ್ವಲ್ಪ ಕಾಲಕ್ಕೆ ಇಲ್ಲದಂತಾಗುತ್ತವೆ. ಒಂದು ಊರಿನಲ್ಲಿ ದೊಡ್ಡ ಹುದ್ದೆಯಲ್ಲಿ, ದೊಡ್ಡ ಧನಿಕನಾಗಿರುವ ಮನುಷ್ಯ ಸತ್ತುಹೋದ ನಂತರ ಪಕ್ಕದ ಊರಿನಲ್ಲೇ ಒಂದು ಬಡ ಕುಟುಂಬದಲ್ಲಿ ಹುಟ್ಟಿ ಅಲ್ಲಿ ಯಾವ ದೊಡ್ಡಸ್ತಿಕೆ ಇಲ್ಲದೇ, ಕಡುಬಡವನಾಗಿ ಬದುಕಬೇಕಾದ ಕರ್ಮವಿದ್ದರೇ ಆತನ ಆತ್ಮ ಆತನನ್ನು ಅಲ್ಲಿಯೇ ಹುಟ್ಟಿಸಿ ಹಾಗೇ ಕರ್ಮವನ್ನು ಜೀವಿಯು ಅನುಭವಿಸುವಂತೆ ಮಾಡುತ್ತದೆ. ಅಮೆರಿಕಾದಲ್ಲಿ ಅಂತರಿಕ್ಷ ಪರಿಶೋಧನಾ ಸಂಸ್ಥೆಯಾಗಿರುವ 'ನಾಸಾ'ದಲ್ಲಿ ಕೆಲಸ ಮಾಡಿ ದೊಡ್ಡದಾಗಿ ಹೆಸರು ಪಡೆದ 'ಕಲ್ಪನಾಚಾವ್ಲಾ' ಎನ್ನುವಾಕೆ ತನ್ನ ಜೀವನವನ್ನು ದೊಡ್ಡ ಹುದ್ದೆಯಲ್ಲಿ, ದೊಡ್ಡ ಆರ್ಥಿಕ ಸಾಮರ್ಥ್ಯದಲ್ಲಿ ಕಳೆದು ಕೊನೆಗೆ ಅಂತರಿಕ್ಷ ಪರಿಶೋಧನೆಗೆ ಹೋಗಿ ಹಿಂತಿರುಗಿ ಬರುವ ಸಮಯದಲ್ಲಿ ನಡೆದ ಅಪಘಾತದಿಂದ ಸತ್ತುಹೋಗುವುದು ನಡೆದಿದೆ. ಅಮೆರಿಕಾದಲ್ಲಿ ಬದುಕಿದ ಆಕೆ ಭಾರತದೇಶದಲ್ಲಿ ಒಂದು ಬಡ ಕುಟುಂಬದಲ್ಲಿ

ಹುಟ್ಟುವುದು ನಡೆದಿದೆ. ಆಕೆಗೆ ನಂತರ ಜನ್ಮದಲ್ಲಿ ನಾಲ್ಕು ವರ್ಷಗಳು ಕಳೆದ ನಂತರ ಹಿಂದಿನ ಜನ್ಮ ಜ್ಞಾಪಕ ಬರುವುದು ನಡೆದಿದೆ. ಆಗ ತನ್ನ ಗತ ಜನ್ಮ ವಿಷಯವನ್ನು ಕುರಿತು ಆಕೆ ಇತರರಿಗೆ ಹೇಳುವುದು ನಡೆದಿದೆ. ಆಗ ಸತ್ಯ ಪ್ರಮಾಣವಾಗಿ ನಡೆದ ವಿಷಯವನ್ನನುಸರಿಸಿ ಮನುಷ್ಯ ಮರಣಿಸಿದ ನಂತರ ಜೀವನವಿದೆಯೆಂದೂ, ಅದೂ ಆತನು ಮಾಡಿಕೊಂಡ ಕರ್ಮವನ್ನನುಸರಿಸಿ ಇರುತ್ತದೆಂದು ತಿಳಿದುಹೋಗುತ್ತಿದೆ.

ಸತ್ತುಹೋದ ನಂತರ ಆತನು ಎಲ್ಲಿ ಜೀವನವನ್ನು ಕಳೆಯುತ್ತಿದ್ದಾನೆಂದಾಗಲಿ, ಎಲ್ಲಿಗೆ ಹೋಗಿದ್ದಾನೆಂದಾಗಲಿ, ನಂತರ ಹುಟ್ಟಿದ್ದಾನೆಂದಾಗಲಿ ಯಾರಿಗೂ ಎಷ್ಟುಮಾತ್ರ ತಿಳಿಯುವುದಿಲ್ಲ. ಆದ್ದರಿಂದ ಮನುಷ್ಯನಿಗೆ ಮನುಷ್ಯನೊಂದರ ಮರಣದವರೆಗು ತಿಳಿದಿದೆಯಾಗಲೀ, ಮರಣದ ನಂತರ ಆತನ ಸ್ಥಿತಿ ಏನೆಂದು ಯಾರಿಗೂ ತಿಳಿಯದು. ಮರಣದ ನಂತರ ಪುನಃ ಹುಟ್ಟುವನೆಂದು ಸಹ ತಿಳಿಯದ ಮಾನವನು ತನಗೆ ತೋಚಿದಂತೆ ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ಅಂದುಕೊಳ್ಳುವುದರಿಂದ ಮರಣದ ನಂತರ ಸ್ವರ್ಗಕ್ಕೆ ಹೋಗುವವೆಂದು ಕೆಲವರೂ, ಇಲ್ಲ ನರಕಕ್ಕೆ ಹೋಗುವೆವೆಂದು ಕೆಲವರೂ ಹೇಳಿಕೊಳ್ಳುವುದು ನಡೆಯುತ್ತಿದೆ. ಕೆಲವರು ಮರಣದ ನಂತರ ಜೀವನವೇ ಇಲ್ಲ ಎನ್ನುತ್ತಿದ್ದಾರೆ. ಕೆಲವರು ಪ್ರಳಯ ಬರುವವರೆಗೂ ಆತನ ಶರೀರವನ್ನು ಹೂತಿಟ್ಟ ಗುಂಡಿಯಲ್ಲೇ ಇರುತ್ತದೆಂದೂ, ಪ್ರಳಯದಲ್ಲಿ ದೇವರು ಎಬ್ಬಿಸಿದಾಗ ಭೂ ಸಮಾಧಿಗಳಿಂದ ಸತ್ತುಹೋದವರು ತಮ್ಮ ಶರೀರಗಳೊಂದಿಗೆ ಎದ್ದು ಬರುತ್ತಾರೆಂದು ಹೇಳುತ್ತಿದ್ದಾರೆ. ಈ ರೀತಿ ಯಾರಿಗೆ ತೋಚಿರುವುದು ಅವರು ಹೇಳಿಕೊಳ್ಳುವುದು ನಡೆಯುತ್ತಿದೆ. ಆದರೇ ನಡೆಯುತ್ತಿರುವ ಸತ್ಯ ಮನುಷ್ಯರಿಗೆ ತಿಳಿಯುವುದಕ್ಕೆ ದೇವರೇ ಆತ್ಮ ಮೂಲಕ ಹಿಂದಿನ ಜನ್ಮಗಳ ಜ್ಞಾಪಕವನ್ನು ಮನುಷ್ಯನಿಗೆ ಬರುವಂತೆ ಮಾಡಿ ಪುನರ್ಜನ್ಮಗಳು ವಾಸ್ತವವೆಂದು ತಿಳಿಸಿದ್ದಾನೆ. ನಡೆದ ಸತ್ಯವೇ ಶಾಸ್ತ್ರವಾದಕಾರಣ ಪುನರ್ಜನ್ಮಗಳಿವೆಯೆಂಬ ಮಾತು ಶಾಸ್ತ್ರಬದ್ಧವಾಗಿ ನಿರೂಪಣೆಗೆ ಬಂದಿದೆ. ಭಗವದ್ಗೀತೆಯಲ್ಲಿ **'ಹುಟ್ಟಿದವನು ಸಾಯುವುದು ತಪ್ಪುವುದಿಲ್ಲ, ಸತ್ತವನು**

**ಹುಟ್ಟುವುದು ತಪ್ಪುವುದಿಲ್ಲ'** ಎಂಬ ಮಾತು ನೆರವೇರುತ್ತಿದೆ ಎಂದು, ಹಿಂದಿನ ಜನ್ಮ ಜ್ಞಾಪಕದಿಂದ ತಿಳಿಯುತ್ತಿದೆ. ಇದರಿಂದ ಮರಣದ ನಂತರ ಜೀವನವಿದೆಯೆಂದು, ಅದು ಈಗಿರುವ ಜೀವನದಹಾಗೆಯೇ ಇದೆಯೆಂದು ಸಹ ತಿಳಿಯುತ್ತಿದೆ.

**ಪ್ರಶ್ನೆ :– ಸತ್ತುಹೋದವನು ಭೂಸಮಾಧಿಯಲ್ಲಿ ಇರುವುದಿಲ್ಲವಾ?**

**ಉತ್ತರ :–** ಸತ್ತುಹೋದವನು ಶರೀರವನ್ನು ಬಿಟ್ಟ ಕೂಡಲೇ ಮತ್ತೊಂದು ಶರೀರವನ್ನು ಸೇರಿ ಅದರಲ್ಲಿ ಜನ್ಮಿಸುತ್ತಿದ್ದಾನೆ. ಭೂಸಮಾಧಿಯಲ್ಲಿ ಮೃತ ದೇಹವನ್ನು ಮಾತ್ರ ಇಟ್ಟಿರುವಾಗ, ಅದೂ ಸಹ ಸ್ವಲ್ಪ ಕಾಲಕ್ಕೆ ಕೊಳತು ಇಲ್ಲದಂತೆ ಹೋಗುತ್ತದೆ. ವರ್ಷದ ನಂತರವಾಗಲೀ, ಅಥವಾ ಸ್ವಲ್ಪ ಕಾಲದ ನಂತರವಾಗಲೀ ಅದೇ ಕುಣಿಯಲ್ಲಿ ಮತ್ತೊಂದು ಮೃತದೇಹವನ್ನು ಹೂತಿಡುವುದು ನಡೆಯುತ್ತಿದೆ. ಹಾಗೆ ಹೂತಿಟ್ಟ ಶರೀರಗಳು ಬೇರೆ, ಆ ಶರೀರದಲ್ಲಿ ನಿವಾಸವಿದ್ದ ಜೀವಾತ್ಮ, ಆತ್ಮಗಳು ಬೇರೆ. ಶರೀರದಲ್ಲಿ ಸ್ವಲ್ಪ ಕಾಲ ನಿವಾಸಿಸಿದ ಜೀವಿಯು ಮತ್ತು ಆತ್ಮ ಮರಣದಲ್ಲಿ ಶರೀರವನ್ನು ಬಿಟ್ಟುಹೋದಾಗ, ಮೃತ ದೇಹವನ್ನು ಮಾತ್ರ ಭೂಮಿಯಲ್ಲಿ ಹೂತಿಡುವುದು ನಡೆಯುತ್ತಿದೆ. ಶರೀರವನ್ನು ಹೂತಿಟ್ಟ ಸ್ಥಳವೂ ಸಹ ಜೀವಿಗೆ ತಿಳಿದಿಲ್ಲ ಏಕೆಂದರೇ! ಸತ್ತುಹೋದ ಕೂಡಲೇ ಅದೇ ಕ್ಷಣದಲ್ಲೇ ಆತನು ಮತ್ತೊಂದು ದೇಹವನ್ನು ಸೇರುತ್ತಿದ್ದಾನೆ. ಹಾಗೆ ಮರಣಿಸಿ ಬೇರೆ ಶರೀರವನ್ನು ಸೇರಿದಾಗ ತನ್ನ ಹಿಂದಿನ ಜ್ಞಾನಪಕಗಳೆಲ್ಲವೂ ಮರಣದೊಂದಿಗೆಯೇ ಹೋಗಿರುವುದರಿಂದ ಗತದಲ್ಲಿ ತಾನು ಯಾರಾಗಿ ಇದ್ದೇನೆಂಬ ವಿಷಯ ಸತ್ತುಹೋಗಿ ಹುಟ್ಟಿದವನಿಗೆ ತಿಳಿಯದು. ಹಿಂದಿನ ಜ್ಞಾಪಕವೇ ಇಲ್ಲದಂತೆ ಹೋದಾಗ, ಮನುಷ್ಯ ಮರಣಿಸಿದ ನಂತರ ಕೆಲವು ಗಂಟೆಗಳಿಗೆ ಆತನ ಶರೀರವನ್ನು ಹೂತಿಡುವುದು ನಡೆಯುತ್ತಿದೆ. ಅದಕ್ಕೂ ಮೊದಲೇ ಎರಡನೆಯ ಜನ್ಮಕ್ಕೆ ಹೋದವನಿಗೆ ಅವನ ಹಳೆಯ ಶರೀರವೊಂದರ ಧ್ಯಾಸವೇ ಇಲ್ಲ. ಅವನ ಹಳೆ ಶರೀರವನ್ನು ಎಲ್ಲಿ ಹೂತಿಟ್ಟಿರುವುದು, ಹೊಸ ಶರೀರದಲ್ಲಿರುವವನಿಗೆ ತಿಳಿಯದು. ಅವನು ಮರಣಿಸಿದ ಕೂಡಲೇ ಅದೇ ಕ್ಷಣವೇ ಎರಡನೇ ಜನ್ಮಕ್ಕೆ

ಹೋಗುವುದರಿಂದ ಅವನ ಶರೀರವನ್ನು ಹೂತಿಟ್ಟ ಭೂಸಮಾಧಿ ವಿಷಯವೇ ಆತನಿಗೆ ತಿಳಿಯದಿರುವಾಗ, ಆತನು ಬಂದು ಭೂಸಮಾಧಿಯಲ್ಲಿ ಇರುವನೆಂದೂ, ಪ್ರಳಯದವರೆಗೂ ಇರುವನೆಂದು ಹೇಳುವುದು ಪೂರ್ತಿ ಅಸತ್ಯವಾಗುತ್ತದೆ. ಹಾಗೆ ಯಾರೂ ಇಲ್ಲಿಯವರೆಗೂ ಇರಲಿಲ್ಲ.

**ಪ್ರಶ್ನ :– ಆದರೇ ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಪ್ರಳಯ ಸಂಭವಿಸಿದಾಗ ಭೂಮಿ ಮತ್ತು ಆಕಾಶ ನಶಿಸಿದಾಗ ದೇವರು ಮನುಷ್ಯನನ್ನು ಸಮಾಧಿಯಿಂದ ಹೊರಗೆ ಬರುವಂತೆ ಮಾಡುತ್ತಿದ್ದಾನೆ. ಸಮಾಧಿಯಿಂದ ಬಂದಿರುವವನಿಗೆ ಅವನು ಬದುಕಿರುವಾಗ ಮಾಡಿದ ಪಾಪ, ಪುಣ್ಯಗಳನ್ನು ಲೆಕ್ಕಿಸಿ ಅವುಗಳ ಪ್ರಕಾರ ಅನುಭವ ಉಂಟಾಗುವಂತೆ ಮಾಡುತ್ತಿದ್ದಾನೆ. ಅವನು ಮಾಡಿಕೊಂಡಿರುವುದನ್ನನುಸರಿಸಿ ಅವನಿಗೆ ಸ್ವರ್ಗವೋ, ನರಕವೋ ನಿರ್ಣಯವಾಗುತ್ತಿದೆ. ಇದೆಲ್ಲವೂ ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ಇದು ನಿಜವಲ್ಲವಾ?**

**ಉತ್ತರ :–** ದೈವಗ್ರಂಥದಲ್ಲಿ ಹೇಳಿರುವುದು ಖಂಡಿತ ವಾಸ್ತವವೇ ಆಗಿದೆ. ಈಗ ನೀವು ಹೇಳಿರುವುದೆಲ್ಲಾ ನಿಜವೇ. ಆದರೇ ದೇವರು ಗ್ರಂಥದಲ್ಲಿ ಹೇಳಿದ ವಿಷಯಗಳೆಲ್ಲವೂ ಸತ್ಯವೇ ಆದರೂ, ಅವುಗಳನ್ನು ಮನುಷ್ಯ ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗುರುವುದರಿಂದ ದೇವರು ಹೇಳಿರುವುದು ಒಂದಾದರೇ, ನಮಗೆ ಅರ್ಥವಾಗಿರುವುದು ಮತ್ತೊಂದು ಎಂದು ತಿಳಿಯುತ್ತಿದೆ. ಅಲ್ಲಿ ಗ್ರಂಥದಲ್ಲಿ ಹೇಳಿದ ಸಮಾಧಿ ಬೇರೆ, ನಮಗೆ ಅರ್ಥವಾದ ಸಮಾಧಿ ಬೇರೆಯೆಂದು ತಿಳಿಯುತ್ತಿದೆ. ಈದಿನ ಕರೆಯಲಾಗುವ 'ಸಮಾಧಿ' ಎಂಬ ಪದ ಪೂರ್ವದಲ್ಲಿ 'ಧಿ' ಕೆಳಗೆ ಗೆರೆ ಇಲ್ಲದಂತಿತ್ತು. ಆ ವಿವರವೆಲ್ಲವೂ ನಾವು **'ಸಮಾಧಿ'** ಎಂಬ ಗ್ರಂಥದಲ್ಲಿ ಬರೆದಿದ್ದೇವೆ. ಅದನ್ನೇ ಸ್ವಲ್ಪ ನೋಡಿರಿ.

ಸಮಾಧಿ ಎಂದರೇ "ಎಲ್ಲರಿಗೂ ಸಮಾನವಾಗಿ ಅನ್ವಯಿಸುವುದು" ಎಂದು ಅರ್ಥ. ಈ ಅರ್ಥ ಹೊಸದಾಗಿ ಕಾಣಿಸಿದರೂ ಇದುವೇ ವಾಸ್ತವವಾದ ಅರ್ಥ. ಕೆಲವರು ಸಮಾಧಿ ಎನ್ನುವುದಕ್ಕೆ ಅರ್ಥವನ್ನು ಹೀಗೆ ಹೇಳಿದ್ದಾರೆ. ಧಿ ಎಂದರೇ ಬುದ್ಧಿಯೆಂದೂ, ಸಮ+ಧಿ = ಸಮಾಧಿಯೆಂದು, ಬುದ್ಧಿಗೆ

ಸಮಾನವಾಗಿ ಇರುವುದೆಂದು ಹೇಳಿದ್ದಾರೆ. ಇದು ಹೇಳಿಕೊಳ್ಳುವುದಕ್ಕೆ ಚೆನ್ನಾಗಿದೆ. ಆದರೇ ಆ ಅರ್ಥ ಯಾವ ವಿಷಯದಲ್ಲಿ ಅನ್ವಯಿಸುತ್ತದೋ, ಬುದ್ಧಿಗೆ ಸಮಾನವಾಗಿ ಇರುವುದು ಯಾವುದೋ, ಅದು ಬದುಕಿರುವಾಗಲಾ? ಸತ್ತುಹೋದಾಗಲಾ? ಎಂಬ ಪ್ರಶ್ನೆಗಳು ಬರಬಲ್ಲವು. ಸತ್ತುಹೋದವನಿಗೆ ಬುದ್ಧಿ ಹೇಗೂ ಇರುವುದಿಲ್ಲ. ಬದುಕಿರುವವನಿಗೆ ಸಮಾಧಿಯೊಂದಿಗೆ ಕೆಲಸವಿಲ್ಲ. ಅವನು ಅದನ್ನು ಹೊಂದುವುದಿಲ್ಲ. ಸಮಾಧಿ ಸತ್ತುಹೋದವನಿಗೇ ಅವಶ್ಯವಾದಾಗ, ಅವನ ಬುದ್ಧಿಯನ್ನು ಕುರಿತು ಹೇಳಿಕೊಳ್ಳಬೇಕಾದ ಅವಶ್ಯವೂ ಇಲ್ಲ. ಏಕೆಂದರೇ ಸತ್ತುಹೋದವನಿಗೆ ಬುದ್ಧಿ ಇರುವುದಿಲ್ಲ. ಈ ವಿಧವಾಗಿ ಯೋಚಿಸಿದರೇ 'ಸಮವಾದ ಬುದ್ಧಿ' ಎಂಬ ಅರ್ಥ ತಪ್ಪು ಎಂದು ತಿಳಿಯುತ್ತಿದೆ. ಯಾರು ಯಾವ ಅರ್ಥವನ್ನು ಹೇಳಿದರೂ ಅದು ಆಧ್ಯಾತ್ಮಿಕ ವಿದ್ಯೆಗೆ ಸರಿಹೋಗುವುದಿಲ್ಲ. ಆದ್ದರಿಂದ ಎಲ್ಲರಿಗೂ ಸಮವಾಗಿ ಜಾರಿಗೆ ಆಗುವುದು ಅಥವಾ ಎಲ್ಲರಿಗೂ ಸಮಾನವಾಗಿ ಅನ್ವಯಿಸುವುದೆಂಬ ಅರ್ಥ ಆಧ್ಯಾತ್ಮಿಕಕ್ಕೂ, ಪ್ರತ್ಯಕ್ಷ ಅನುಭವಕ್ಕೂ ಸರಿಹೋಗುತ್ತದೆ. ಇಂದು ಸಮಾಧಿ ಎಂದು ಹೇಳುವ ಪದ ಪೂರ್ವ ಸಮ+ಆದಿ=ಸಮಾದಿಯಾಗಿ ಇತ್ತು. ದಿ ಗೆ ಕೆಳಗೆ ಗೆರೆ ಇಲ್ಲ. ಆದಿ ಎಂದರೇ ಮೊದಲಿನಲ್ಲಿ ಅಥವಾ ಸೃಷ್ಠಿ ಮೊದಲಿನಲ್ಲಿ ಎಂದು ಅರ್ಥ. ಸಮ ಎಂದರೇ ಎಲ್ಲರಿಗೂ ತಿಳಿದ ಅರ್ಥವೇ, ಸಮಾದಿ ಎಂದರೇ ಸೃಷ್ಠಿ ಮೊದಲಿನಿಂದ ಎಲ್ಲರಿಗು ಸಮವಾಗಿ ಇರುವುದೆಂದು ಅಥವಾ ಅನ್ವಯಿಸುತ್ತಿರುವುದೆಂದು ಅರ್ಥ. ಇಲ್ಲಿ ವಿಶೇಷವೇನೆಂದರೇ ಸೃಷ್ಠಿ ಆದಿಯಿಂದ ಎನ್ನುವುದರಲ್ಲಿ ಸೃಷ್ಟಿ ಪ್ರಾರಂಭವಾದ ನಂತರ ಎಲ್ಲರಿಗೂ ಮೊದಲಿನಿಂದ ಸಮಾದಿ ಇದೆಯೆಂದು ತಿಳಿಯುತ್ತಿದೆ. ಆದಿಯಿಂದ ಸಮವಾಗಿ ಇರುವುದಾದ್ದರಿಂದ, ಈ ಸಮಾದಿ ಮೊದಲಿನಿಂದ ಮೊದಲಾಗಿರುವುದೆಂದು ತಿಳಿಯುತ್ತಿದೆ. ಜೀವಿಯ ಮೊದಲ ಪುನರ್ಜನ್ಮದಲ್ಲೇ ಸಮಾದಿ ಇದೆ. ಮನುಷ್ಯ ಮರಣಿಸಿದ ನಂತರ ಏರ್ಪಡುವುದು ಸಮಾಧಿ ಅಲ್ಲ. ಮನುಷ್ಯ ಸತ್ತುಹೋದಾಗ ಸಮಾದಿ ಎನ್ನುವುದು ಎಲ್ಲರಿಗೂ ಸಮವಾಗಿ ಅನ್ವಯಿಸುವುದಿಲ್ಲ. ಈ ಮಾತುಗಳನ್ನು ಕೇಳುವ ನಿಮಗೆ ಇದೆಲ್ಲಾ ಹೊಸದಾಗಿಯೇ ಕಾಣಿಸುತ್ತದೆ. ಕೆಲವರು ನಮ್ಮ ಮಾತುಗಳನ್ನು ನಂಬುವುದಿಲ್ಲ. ಕೆಲವರು

ಅನ್ವೇಷಕರಾಗಿ ಇರುವವರು ಪರಿಶೋಧನಾ ಬುದ್ಧಿಯಿಂದ ಯೋಚಿಸುವರು. ಹಾಗೆ ಯೋಚಿಸುವವರಿಗೆ ತಪ್ಪದೇ ಸತ್ಯ ತಿಳಿಯುತ್ತದೆ. ಒಬ್ಬ ಮನುಷ್ಯ ಸತ್ತುಹೋದಾಗ ಆತನ ಶರೀರವನ್ನು ಭೂಮಿಯಲ್ಲಿ ಹೂತಿಟ್ಟರೂ, ಅದನ್ನು ಅರ್ಥದ ಪ್ರಕಾರ ಸಮಾಧಿ ಎಂದಾಗಲೀ, ಸಮಾದಿ ಎಂದಾಗಲೀ ಎನ್ನುವುದಕ್ಕೆ ಅವಕಾಶವಿಲ್ಲ. ಈ ಅರ್ಥಗಳು ಹೂತಿಟ್ಟಿರುವ ಗುಂಡಿಗಳಿಗಾಗಲೀ, ಕಟ್ಟಲಾಗಿರುವ ಗೋರೀಗಳಿಗಾಗಲೀ ಅನ್ವಯಿಸುವುದಿಲ್ಲ.

ಎಲ್ಲ ಮತಗಳಲ್ಲಿಯೂ ಸಮಾಧಿ ಎಂಬ ಪದವಿದ್ದರೂ, ಪ್ರವಕ್ತರೆಲ್ಲರೂ ಎಷ್ಟೋ ದೊಡ್ಡ ಭಾವದಿಂದ ಹೇಳಿದರೂ, ಅದನ್ನು ಯಾವ ಮತಸ್ಥರೂ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆಂದು ಹೇಳುತ್ತಿದ್ದೇವೆ. ನಮ್ಮೆಲ್ಲರಿಗು ಅರ್ಥವಾಗದಿರುವುದು, ನಮಗಿಂತ ಮೀರಿದ ಜ್ಞಾನಪಂಡಿತರೆಲ್ಲರಿಗೂ ಅರ್ಥವಾಗದಿರುವುದು, ನಿನಗೊಬ್ಬನಿಗೇ ಅರ್ಥವಾಗಿದೆಯಾ? ಎಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೇ! ಯಾವುದು ನಿಜವಾದ ಜ್ಞಾನ, ಯಾರದು ನಿಜವಾದ ಜ್ಞಾನ ಎಂಬ ಪ್ರಶ್ನೆಗೆ ಉತ್ತರವಾಗಿ, ಎಲ್ಲಾದರೇ ಪ್ರಶ್ನೆ ಉಳಿದುಹೋಗಿ ಉತ್ತರ ಇಲ್ಲದಂತಾಗುತ್ತಿದೆಯೋ ಅದು ನಿಜವಾದ ಜ್ಞಾನವಲ್ಲ. ***ಎಲ್ಲಾದರೇ ಪ್ರಶ್ನೆ ಉಳಿಯದಂತೆ ಸರ್ವತ್ರಾ ಉತ್ತರವಿದೆಯೋ, ಎಲ್ಲಾದರೇ ಯಾರೂ ಎದುರು ಪ್ರಶ್ನಿಸದ ಜ್ಞಾನವಿದೆಯೋ, ಅದೇ ನಿಜವಾದ ದೇವರ ಜ್ಞಾನವೆಂದು ಹೇಳಬಹುದು.*** ನಾನು ಹೇಳಿದ ಸಮಾದಿ ವಿಷಯದಲ್ಲಾಗಲೀ, ಪ್ರವಕ್ತರು ಹೇಳಿದ ಸಮಾದಿ ವಿವರದಲ್ಲಾಗಲೀ ಎಲ್ಲೂ ಪ್ರಶ್ನೆಗಳು ಉಳಿಯುವುದಿಲ್ಲ. ಆದ್ದರಿಂದ ಇಲ್ಲಿ ನಾವು ಹೇಳುವ ಜ್ಞಾನ ನಿಜವಾದ ದೈವಜ್ಞಾನವೆಂದೂ, ಅದೇ ನಿಜವಾದ ಧರ್ಮವೆಂದೂ ತಿಳಿಸುತ್ತಿದ್ದೇವೆ. ಇತರರು ಹೇಳುವ ಸಮಾಧಿ ವಿಷಯದಲ್ಲಿ ಕೊನೆಗೆ ಪ್ರಶ್ನೆಗಳು ಉಳಿದು ಸಮಾಧಾನ ಇಲ್ಲದಂತೆ ಹೋಗುತ್ತಿದೆ. ಆದ್ದರಿಂದ ಅದು ಸೂತ್ರದ ಪ್ರಕಾರ ನಿಜವಾದ ದೈವಜ್ಞಾನ ಅಲ್ಲವೆಂದು ಹೇಳಬಹುದು. ಎಲ್ಲ ಮತಗಳ ಗ್ರಂಥಗಳಲ್ಲಿ ಸಹ ನಾವು ಹೇಳಿದ ವಿಷಯವನ್ನೇ ನೂರಕ್ಕೆ ನೂರುಪಾಲು ಪ್ರವಕ್ತರೆಲ್ಲರೂ ಹೇಳಿದ್ದಾರೆ.

ಆದರೇ ಒಂದೇ ಒಂದು ತಪ್ಪು ನಡೆದಿದೆ, ಮನುಷ್ಯ ಮಾಯ ವಶವಾಗಿ ದೇವರು ಹೇಳಿರುವುದನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದಾನೆ. ಅದೇ ಮನುಷ್ಯ ಮಾಡಿದ ದೊಡ್ಡ ತಪ್ಪು. ಆ ತಪ್ಪಿನಿಂದಲೇ ದೇವರ ಧರ್ಮ ಮನುಷ್ಯರ ಮಧ್ಯದಲ್ಲಿ ಅಧರ್ಮವಾಗಿ ಬದಲಾಗಿ ಪ್ರಚಾರವಾಗಿದೆ. ಊರೆಲ್ಲಾ ಉತ್ತರವೆಂದರೇ ಒಬ್ಬನು ಮಾತ್ರ ದಕ್ಷಿಣವೆಂದಂತೆ, ಮನುಷ್ಯರಾದ ಎಲ್ಲರೂ ಮರಣ ನಡೆದಾಗ ಸಮಾಧಿ ಎಂದರೇ, ನಾವು ಮಾತ್ರ ಅದು ಸತ್ಯವೇ ಅಲ್ಲ, ಮನುಷ್ಯ ಜನ್ಮಿಸಿದಾಗಲೇ ಸಮಾದಿ ಎನ್ನುತ್ತಿದ್ದೇವೆ. ಯಾರೂ ಹೇಳದ್ದನ್ನು ದೇವರು ಹೇಳಿದ್ದಾನೆ, ಪ್ರವಕ್ತರು ಹೇಳಿದ್ದಾರೆನ್ನುತ್ತಾ, ನೀನೊಬ್ಬನೇ ವಿರುದ್ಧವಾಗಿ ಏಕೆ ಮಾತನಾಡುತ್ತಿದ್ದೀಯ? ಎಂದು ನನ್ನನ್ನು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ಧೈರ್ಯವಾಗಿ ನಾವು ಒಂದೇ ಉತ್ತರವನ್ನು ಹೇಳುತ್ತಿದ್ದೇವೆ. **ಯಾವುದು ಸತ್ಯವೋ ಅದನ್ನೇ ನಾವು ಹೇಳುತ್ತಿದ್ದೇವೆ.** ಅಸತ್ಯವನ್ನು ಲೋಕದಲ್ಲಿ ಇರುವವರೆಲ್ಲರೂ ಸತ್ಯವೇ ಎಂದರೂ ಅದು ಸತ್ಯವಲ್ಲ. ಅದನ್ನು ನಾನು ಒಪ್ಪಿಕೊಳ್ಳುವುದಿಲ್ಲ. ಅಷ್ಟೇ ಅಲ್ಲದೆ ದೇವರು ಹೇಳಿದ ಪ್ರತ್ಯಕ್ಷ ಸತ್ಯವನ್ನು ಗ್ರಹಿಸದೆ, ಅಸತ್ಯ ವಿಷಯವನ್ನು ನೀವು ಹೇಗೆ ಸಮರ್ಥಿಸುತ್ತಿದ್ದೀರೆಂದು ನಾವೂ ಸಹ ಪ್ರಶ್ನಿಸುತ್ತಿದ್ದೇವೆ. ಆದರೇ ನಮ್ಮ ಮಾತು ಬಹಳ ಜನರಿಗೆ ಮೊಂಡುವಾದದಂತೆ ಕಾಣಿಸುತ್ತದೆ. ಚೆನ್ನಾಗಿ ಯೋಚಿಸುವ ಕೆಲವರಿಗೆ ನಮ್ಮ ಮಾತು ಸತ್ಯವೆಂದು ತಿಳಿಯಬಲ್ಲದು. ಇಲ್ಲಿಯವರೆಗೂ ಎಲ್ಲರಿಗೂ ಸಮಾಧಿ ಎಂಬ ಪದ ಸಾಧಾರಣವಾಗಿ ಕಾಣಿಸಿದರೂ, ಈಗ ನಾವು ಹೇಳುವ ಭಾವದಿಂದ **ಸಮಾದಿ** ಎಂಬ ಶಬ್ದ ಸಾಮಾನ್ಯವಾಗಿರುವುದಲ್ಲವೆಂದೂ, ಇದು ಯಾವುದೋ ದೊಡ್ಡ ಅರ್ಥದಿಂದ ಕೂಡಿಕೊಂಡಿರುವುದೇ ಅಲ್ಲದೇ, ಧರ್ಮಾಧರ್ಮ ವಿಷಯಗಳೊಂದಿಗೆ ಸಂಬಂಧಹೊಂದಿದೆಯೆಂದು ಸಹ ಅರ್ಥವಾಗುತ್ತಿದೆ. ಮನುಷ್ಯರೆಲ್ಲರೂ ಮಂಕಾಗಿ(ಮೋಸ)ಹೋದ ಸಮಾಧಿ (ಸಮಾದಿ) ಏನೋ? ಹೇಗೆ ಪ್ರತ್ಯಕ್ಷ ಪ್ರಮಾಣವೋ ವಿವರಿಸಿಕೊಂಡು ನೋಡೋಣ.

ಗರ್ಭ ಎಂಬ ಮಾತನ್ನು ಎಲ್ಲರೂ ಕೇಳಿರುತ್ತೇವೆ. ತಾಯಿ ಗರ್ಭ, ಭೂಗರ್ಭ ಎಂಬ ಮಾತುಗಳನ್ನು ಕೇಳಿರುತ್ತೇವೆ. ಗರ್ಭ ಎಂಬ ಪದಕ್ಕೆ ಅರ್ಥ

ಕಾಣಿಸದಂತೆ ಮುಚ್ಚಿರುವುದೆಂದು ತಿಳಿಯುತ್ತಿದೆ. ತಾಯಿಗರ್ಭ ಶಿಶು ಶರೀರವನ್ನು ಮುಚ್ಚಿರುತ್ತದೆ. ಹಾಗೆಯೇ ಭೂಗರ್ಭ ಮೃತ ಶರೀರವನ್ನು ಕಾಣಿಸದಂತೆ ಮುಚ್ಚಿಟ್ಟಿದೆ.ಇದನ್ನನುಸರಿಸಿ ಗರ್ಭಗಳು ಎರಡು ವಿಧಗಳೆಂದೂ ಒಂದು ಹುಟ್ಟುವ ಹೊಸ ಶರೀರವನ್ನು ಬಚ್ಚಿಡುವುದು, ಎರಡು ಸತ್ತುಹೋದ ಹಳೆಯ ಶರೀರವನ್ನು ಬಚ್ಚಿಡುವುದೆಂದು ತಿಳಿಯುತ್ತಿದೆ. ಭೂಗರ್ಭವನ್ನು ಎಲ್ಲರೂ ಸಮಾಧಿ ಎನ್ನುವುದು ನಡೆಯುತ್ತಿದೆ. ಭೂಗರ್ಭವನ್ನು ಸಮಾಧಿ ಎನ್ನುವುದು ಬಹಳ ದೊಡ್ಡ ತಪ್ಪು. ಏಕೆಂದರೇ! ಭೂಗರ್ಭದಲ್ಲಿನ ಶರೀರ ಮೃತಪಟ್ಟಿರುವುದು. ಆ ಶರೀರದಲ್ಲಿ ಜೀವಿಯು ಇಲ್ಲ ಮತ್ತು ಆತ್ಮವೂ ಇಲ್ಲ. ಜೀವಿಯಾಗಲೀ, ಆತ್ಮವಾಗಲೀ ಇರುವುದಾದರೇ ಜೀವಿಗೆ ಸಮವಾಗಿ ಅನ್ವಯಿಸುವುದೆಂದು ಹೇಳಬಹುದು. ಜೀವಿಯೇ ಇಲ್ಲದಿರುವಾಗ ಜಡವಾದ ಶರೀರಕ್ಕೆ ಸಮವಾಗಿ ಅನ್ವಯಿಸುವುದೆಂದು ಹೇಳುವುದಕ್ಕೆ ಅವಕಾಶವಿಲ್ಲ. ಜೀವಿಯು ಇಲ್ಲದ ಶರೀರವು ಗುರುತಿಸಲಾಗದ್ದು, ಆದ್ದರಿಂದ ಮೃತ ಶರೀರಕ್ಕೆ ಸಮಾಧಿ (ಸಮಾದಿ) ಎಂಬ ಮಾತು ಅನ್ವಯಿಸುವುದಿಲ್ಲ. ಹಾಗೆಯೇ ತಾಯಿ ಗರ್ಭದಲ್ಲಿನ ಶಿಶು ಶರೀರದಲ್ಲಿ ಜೀವಿಯೂ ಇಲ್ಲ, ಆತ್ಮವೂ ಇಲ್ಲ. ಆದ್ದರಿಂದ ತಾಯಿ ಗರ್ಭವನ್ನು ಸಹ ಸಮಾಧಿ ಎನ್ನುವುದಕ್ಕೆ ಅವಕಾಶವಿಲ್ಲ. ತಾಯಿಗರ್ಭವಾಗಲೀ, ಭೂಗರ್ಭವಾಗಲೀ, ಒಂದು ಹುಟ್ಟಬೇಕಾದ ಶಿಶು ಶರೀರವನ್ನು, ಮತ್ತೊಂದು ಸತ್ತುಹೋದ ಮೃತಶರೀರವನ್ನು ಮುಚ್ಚಿಟ್ಟಿರುವುದೇ ಹೊರತು ಅವು ಸಮಾದಿಗಳಲ್ಲ. **ಗರ್ಭವೆಂದರೇ ಮರ್ಮವಾಗಿ ಇಡುವುದು ಅಥವಾ ರಹಸ್ಯವಾಗಿ ಬಚ್ಚಿಟ್ಟಿರುವುದೆಂದು ಅರ್ಥ.**

ಭೂಗರ್ಭಕ್ಕಾಗಲೀ, ತಾಯಿ ಗರ್ಭಕ್ಕಾಗಲೀ ಸಮಾಧಿ (ಸಮಾದಿ) ಎಂಬ ಹೆಸರು ಅನ್ವಯಿಸದಂತಿರುವಾಗ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಆಧ್ಯಾತ್ಮಿಕ ವಿದ್ಯೆಯನ್ನು ಅನುಸರಿಸಿ ಸಮಾದಿ ಎನ್ನುವುದು ಎಲ್ಲಿದೆ? ಯಾವುದನ್ನು ಸಮಾಧಿ ಎಂಬ ಪ್ರಶ್ನೆ ಬರಬಹುದು? ಎಂದು ಪ್ರಶ್ನೆ ಬರಬಲ್ಲದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ಒಬ್ಬ ಮನುಷ್ಯನನ್ನು ಪ್ರಕೃತಿ ಭಾಗವೆಂದೂ, ಆತ್ಮ ಭಾಗವೆಂದೂ ಎರಡು ಭಾಗಗಳಾಗಿ ವಿಭಜಿಸಿ ನೋಡಬಹುದು. ಪ್ರಕೃತಿ ಭಾಗದಲ್ಲಿ ಒಟ್ಟು

ಶರೀರವೆಲ್ಲಾ ಇರುತ್ತದೆ. ಆತ್ಮ ಭಾಗದಲ್ಲಿ ಜೀವಾತ್ಮ, ಆತ್ಮ ಇರುತ್ತದೆ. ಅಷ್ಟೇ ಅಲ್ಲದೆ ಪರಮಾತ್ಮ ಸಹ ಇರುತ್ತದೆ. ಆದರೇ ಪರಮಾತ್ಮ ಶರೀರದ ಹೊರಗೂ, ಶರೀರದ ಒಳಗೂ ಇರುವುದರಿಂದ ಆತ್ಮ ಭಾಗಗಳಾಗಿ ಜೀವಾತ್ಮ, ಆತ್ಮವನ್ನು ಮಾತ್ರ ಪರಿಗಣನೆಗೆ ತೆಗೆದುಕೊಂಡಿದ್ದೇವೆ. ಜೀವಾತ್ಮ, ಆತ್ಮ ಇಲ್ಲದ 24 ಭಾಗಗಳ ಶರೀರವನ್ನು ಒಂದು ಭಾಗವಾಗಿ, ಜೀವಾತ್ಮ ಆತ್ಮವನ್ನು ಮಾತ್ರ ಒಂದು ಭಾಗವಾಗಿ ಗುರುತಿಸಿದರೇ ಪ್ರಕೃತಿ ಭಾಗವಾದ ಶರೀರಕ್ಕೆ ಸಮಾದಿ ಇಲ್ಲವೆಂದು ತಿಳಿಯುತ್ತಿದೆ. ಜಗತ್ತಿನಲ್ಲಿ ಧರ್ಮಗಳಿಗೆ ಗ್ಲಾನಿ (ಆಪತ್ತು) ಏರ್ಪಟ್ಟು ಅಧರ್ಮಗಳು ಪ್ರಚಾರ ವಾದಾಗ ಸಮಾದಿ ಎಂಬ ಧರ್ಮ ಅಧರ್ಮವಾಗಿ ಬದಲಾಗಿ, ವಾಸ್ತವವಾದ ಸಮಾದಿ ತಿಳಿಯದಂತೆ ಹೋಗಿ, ಅಸತ್ಯವಾದ ಸಮಾದಿ ತಿಳಿಯುತ್ತಿದೆ. ಅದರಿಂದ ಪ್ರಜೆಗಳು ಭೂಗರ್ಭವನ್ನು ಸಮಾದಿ ಎಂದುಕೊಳ್ಳುವುದು ನಡೆಯುತ್ತಿದೆ. ಭೂಗರ್ಭವನ್ನು ಸಮಾಧಿ ಅಂದುಕೊಳ್ಳುವುದು ಅಧರ್ಮವೆಂದು ಯಾರಿಗೂ ತಿಳಿಯದಂತೆ ಹೋಗಿದೆ.

ಪ್ರಕೃತಿ ಭಾಗವಾದ ಶರೀರಕ್ಕೆ ಅಲ್ಲದೆ ಜೀವಾತ್ಮಕ್ಕೂ, ಆತ್ಮಕ್ಕೂ ಮಾತ್ರವೇ ಸಮಾದಿ ಇದೆಯೆಂದೂ, ಆತ್ಮ ಭಾಗಗಳಾದ ಜೀವಾತ್ಮ, ಆತ್ಮಗಳಿಗಿರುವ ಸಮಾದಿಯೇ ನಿಜವಾದ ಸಮಾದಿ ಎಂದೂ, ಅದುವೇ ದೈವಧರ್ಮವೆಂದೂ ತಿಳಿಯಬೇಕು. ಜೀವಿಗೆ ಜನ್ಮ (ಪುನರ್ಜನ್ಮ) ಮೊದಲಿನಿಂದ ಇರುವುದರಿಂದ "ಆದಿ" ಎಂದು ಹೇಳುವುದೇ ಅಲ್ಲದೇ, ಜೀವಿಗಳೆಲ್ಲರಿಗೂ ಒಂದೇ ವಿಧವಾಗಿ ಅನ್ವಯಿಸುವುದಾದ್ದರಿಂದ "ಸಮ" ಎಂದು ಹೇಳಲಾಗಿದೆ. ಅದನ್ನೇ ಪೂರ್ತಿಯಾಗಿ ಸಮಾದಿ ಎಂದು ಹೇಳಿದ್ದಾರೆ. ನಾವು ಹೇಳುವುದು ಎಲ್ಲರಿಗೂ ಹೊಸ ಮಾರ್ಗದಂತೆ ಕಾಣಿಸಿದರೂ, ಇದು ಇಲ್ಲಿಯವರೆಗೂ ತಿಳಿಯದಂತೆ ಹೋಗಿರುವ ಧರ್ಮವೆಂದು ತಿಳಿಯಬೇಕು. ಪ್ರವಕ್ತರೆಲ್ಲರೂ ಇದೇ ಧರ್ಮವನ್ನು ತಿಳಿಸಿದರೂ, ಪ್ರಜೆಗಳು ಅದನ್ನು ತಿಳಿಯಲಾರದಂತೆ ಹೋಗಿದ್ದಾರೆಂದು ಹೇಳಬಹುದು. ಪ್ರವಕ್ತರು ಹೇಳಿದ ಸಮಾದಿ ಧರ್ಮವನ್ನು ಸವಿವರವಾಗಿ ತಿಳಿದುಕೊಳ್ಳುವುದಾದರೇ, ಮನುಷ್ಯ ಸತ್ತುಹೋದಾಗ ಶರೀರವನ್ನು ಬಿಟ್ಟು ಜೀವಾತ್ಮ, ಆತ್ಮಗಳು ಹೊರಗೆ

ಹೋಗುವವು. ಆ ರೀತಿ ಮರಣದಲ್ಲಿ ಜೀವಾತ್ಮ, ಆತ್ಮಗಳು ಬಿಟ್ಟಿರುವ ಶರೀರವನ್ನು ಭೂಗರ್ಭದಲ್ಲಿ (ಭೂಮಿಯಲ್ಲಿ) ಹೂತಿಟ್ಟರೇ ಅದು ಸಮಾದಿ ಅಲ್ಲ. ಸಮ+ಆದಿ=ಸಮಾದಿ ಎಂಬ ಅರ್ಥ ಭೂಗರ್ಭಕ್ಕೆ ಅನ್ವಯಿಸುವುದಿಲ್ಲ. ಹಾಗೆಯೇ ತಾಯಿ ಗರ್ಭದಲ್ಲಿನ ಜೀವಾತ್ಮ, ಆತ್ಮ ಇಲ್ಲದ ಶಿಶು ಶರೀರಕ್ಕೂ ಸಹ ಸಮಾದಿ ಪದ ಅನ್ವಯಿಸುವುದಿಲ್ಲ. ಜೀವಾತ್ಮ, ಆತ್ಮ ಎಲ್ಲಿ ನಿಕ್ಷಿಪ್ತವಾಗಿ ಹೋಗುತ್ತಿದ್ದಾರೋ ಅದನ್ನೇ ಸಮಾಧಿ ಅಥವಾ ಸಮಾದಿ ಎನ್ನಬಹುದು. ಜೀವಿಯು ಜನ್ಮಿಸುವ ಸಮಯವನ್ನು "ಆದಿ" ಎನ್ನಬಹುದು. ಜೀವಿಯು ಶರೀರವನ್ನು ಧರಿಸಿದರೇ ಅದನ್ನು ಜನ್ಮ ಇಲ್ಲವೆ ಪುನರ್ಜನ್ಮ ಎನ್ನುತ್ತಿದ್ದೇವೆ. ಹಾಗೆ ಶರೀರವನ್ನು ಧರಿಸುವ ಮೊದಲ ಸಮಯವನ್ನು "ಆದಿ" ಎನ್ನುವುದಲ್ಲದೇ, ಅದು ಜೀವಿಗಳೆಲ್ಲರಿಗೂ ಸಮವಾಗಿ ಅನ್ವಯಿಸುವುದಾದ್ದರಿಂದ ಸಮಾದಿ ಎನ್ನುವುದು ನಡೆದಿದೆ. ಒಬ್ಬ ಜೀವಿಯು ಶರೀರದಲ್ಲಿ ಪ್ರವೇಶಿಸಿ, ಆ ಶರೀರದಲ್ಲಿ ನಿಕ್ಷಿಪ್ತವಾಗಿ (ಬಚ್ಚಿಡಲಾಗಿ) ಯಾರಿಗೂ ಕಾಣಿಸದಂತೇ ಇರುವುದನ್ನು ವಾಸ್ತವವಾಗಿ ಸಮಾದಿ ಎನ್ನಬಹುದು.

ಆತ್ಮ, ಜೀವಾತ್ಮಗಳು ಎರಡೂ ಜೋಡಿ ಆತ್ಮಗಳು, ಒಂದನ್ನು ಬಿಟ್ಟು ಮತ್ತೊಂದು ಇರುವುದಕ್ಕೆ ಅವಕಾಶವಿಲ್ಲ. ಜೀವಿಯು ಜನ್ಮಗಳಿಗೆ ಹೋಗದಂತೆ ಮೋಕ್ಷವನ್ನು ಹೊಂದಿದಾಗಲೇ ಆತ್ಮ, ಜೀವಾತ್ಮ ಒಂದರಲ್ಲೊಂದು ಬೆರೆತುಹೋಗುವುದು ನಡೆಯುತ್ತದೆ. ಅಲ್ಲಿಯವರೆಗು ಎಷ್ಟು ಯುಗಗಳು ಕಳೆದರೂ, ಎಷ್ಟು ಕಲ್ಪಗಳು ಕಳೆದುಹೋದರೂ ಜೀವಾತ್ಮ, ಆತ್ಮಗಳು ಬೇರೆಯಾಗುವುದಿಲ್ಲ. ಶರೀರ ಮರಣಿಸಿದಾಗ ಶರೀರವನ್ನು ಬಿಟ್ಟು ಹೋದ ಜೀವಾತ್ಮ, ಆತ್ಮಗಳು ಕರ್ಮಪ್ರಕಾರ ನಿರ್ಣಯಿಸಲಾಗಿರುವ ಬೇರೊಂದು ಶರೀರವನ್ನು ಸೇರುತ್ತವೆ. ಹಾಗೆ ಬೇರೊಂದು ಶರೀರವನ್ನು ಸೇರುವುದನ್ನು ಜನ್ಮ ಅಥವಾ ಪುನರ್ಜನ್ಮ ಎನ್ನಬಹುದು. ಶರೀರವನ್ನು ಬಿಟ್ಟು ಹೋಗುವುದನ್ನು ಮರಣವೆಂದೂ, ಹೊಸ ಶರೀರವನ್ನು ಸೇರುವುದನ್ನು ಜನನವೆಂದೂ, ಎಲ್ಲರಿಗೂ ತಿಳಿದರೂ ಮರಣದಲ್ಲಿ ಏನು ನಡೆಯುತ್ತದೆ, ಜನನದಲ್ಲಿ ಏನು ನಡೆಯುತ್ತಿದೆಯೊ ವಾಸ್ತವವಾಗಿ ಯಾರಿಗೂ ತಿಳಿದಿಲ್ಲ. ಜನನ ಮರಣಗಳು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಸಿದ್ಧಾಂತಗಳೇ ಆದರೂ

ಅವು ಯಾರಿಗೂ ತಿಳಿದಿಲ್ಲ, ಆದ್ದರಿಂದ ರಹಸ್ಯಗಳಾಗಿ ಉಳಿದು ಹೋಗಿವೆ. ನಾವು ಗತದಲ್ಲಿ ಇವುಗಳ ವಿವರ ಎಲ್ಲರಿಗೂ ಅರ್ಥವಾಗುವಂತೆ **"ಜನನ ಮರಣ ಸಿದ್ಧಾಂತ", "ಮರಣ ರಹಸ್ಯ", "ಪುನರ್ಜನ್ಮ ರಹಸ್ಯ", "ಸಮಾಧಿ"** ಎಂಬ ಗ್ರಂಥಗಳನ್ನು ಬರೆಯುವುದು ನಡೆದಿದೆ.

**ಪ್ರಶ್ನೆ :– 'ಸಮಾಧಿ' ಎಂದರೇ ನೀವು ಹೇಳಿದ ಅರ್ಥ ಪ್ರತ್ಯೇಕವಾಗಿದೆ. ಇಂದಿನಿಂದ ನಾವೂ ಸಹ ನಿಮ್ಮ ಭಾವದ ಪ್ರಕಾರವೇ ಸಮಾಧಿಯನ್ನು ಕುರಿತು ಅಂದುಕೊಳ್ಳುತ್ತೇವೆ. ಆದರೇ ದೈವಗ್ರಂಥದಲ್ಲಿ 'ಪ್ರಳಯ' ಎಂಬ ಮಾತನ್ನು ಬರೆದಿದ್ದಾರಲ್ಲವೆ! ಅದನ್ನು ಕುರಿತು ನೀವೇನನ್ನುತ್ತೀರಾ?**

ಉತ್ತರ :– ದೇವರು ಸೂಕ್ಷ್ಮವಾದವನು ಆದುದರಿಂದ ದೇವರ ವಿಷಯವಾಗಿ ಹೇಳಿದ ಜ್ಞಾನವನ್ನು ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕಾಗಿದೆ. ಸೂಕ್ಷ್ಮವಾಗಿ ಅರ್ಥ ಮಾಡಿಕೊಂಡಾಗಲೇ ದೇವರ ಜ್ಞಾನದಲ್ಲಿನ ನಿಜವಾದ ಭಾವ ತಿಳಿಯುತ್ತದೆ. ಅದರ ಪ್ರಕಾರ ಇಲ್ಲಿ ಹೇಳಿದ ಪ್ರಳಯವನ್ನು ಸಹ ನೀವು ಸ್ಥೂಲವಾಗಿ ಅರ್ಥ ಮಾಡಿಕೊಳ್ಳದೇ ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕಾದ ಅವಶ್ಯವಿದೆ. **"ದೇವರು ಸೃಷ್ಟಿ ಆದಿಯಲ್ಲಿ ಭೂಮಿ ಮತ್ತು ಆಕಾಶಗಳನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಸೃಷ್ಟಿಸಿದನು"** ಎಂದು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ 50, ಆಯತ್ 38ರಲ್ಲಿ ಹೇಳಲಾಗಿದೆ. ಮತ್ತೊಂದು ಕಡೆ ಏಳು ಆಕಾಶಗಳೆಂದು ಸಹ ಹೇಳಿದ್ದಾರೆ. ಇಲ್ಲಿ ಭೂಮಿ, ಆಕಾಶಗಳು ಎನ್ನುವವುಗಳನ್ನು ಸ್ಥೂಲವಾಗಿ ತೆಗೆದುಕೊಳ್ಳಬಾರದು. ಸ್ಥೂಲವಾಗಿ ತೆಗೆದುಕೊಂಡರೇ ವಾಕ್ಯದಲ್ಲಿರುವಂತೆ 'ಆಕಾಶಗಳು' ಎನ್ನುವ ಬಹುವಚನದ ಮಾತಿಗೆ ಅರ್ಥವೇ ಇಲ್ಲದಂತಾಗುತ್ತದೆ. ಆಗ ಆ ವಾಕ್ಯ ಸರಿಯಾದ ಭಾವದಲ್ಲಿ ಅರ್ಥವಾಗದಂತೆ ಹೋಗುತ್ತದೆ. ಆದ್ದರಿಂದ ಗ್ರಂಥದಲ್ಲಿ ಹೇಳಿದ ವಾಕ್ಯ ಸಕ್ರಮವಾಗಿ ಅರ್ಥವಾಗುವುದಕ್ಕೆ ಸೂಕ್ಷ್ಮವಾಗಿಯೇ ಅರ್ಥ ಮಾಡಿಕೊಳ್ಳಬೇಕು. ಹೀಗೆ ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕಾದ ವಿಷಯಗಳು ಗ್ರಂಥದಲ್ಲಿ ಇರುವುದರಿಂದ ಮೂರನೆಯ ಸೂರಾದಲ್ಲೇ ದೇವರು (ಅಲ್ಲಾಹ್) ಗ್ರಂಥದಲ್ಲಿ 'ಮುತಷಾಬಿಹಾತ್ ವಾಕ್ಯಗಳು (ಸೂಕ್ಷ್ಮವಾಕ್ಯಗಳು)"

ಇವೆಯೆಂದು ಹೇಳಿದ್ದಾನೆ. ಆದ್ದರಿಂದ ದೇವರು ದೈವ ಗ್ರಂಥಗಳಲ್ಲಿ ಹೇಳಿದ ವಾಕ್ಯಗಳನ್ನು ಕೆಲವನ್ನು ತಪ್ಪದೆ ಸೂಕ್ಷ್ಮವಾಗಿಯೇ ಅರ್ಥ ಮಾಡಿಕೊಳ್ಳಬೇಕಾಗಿದೆ. ಇಲ್ಲಿ ಪ್ರಳಯ ಎಂದರೆ ಸ್ಥೂಲವಾಗಿ ಅರ್ಥ ಮಾಡಿಕೊಳ್ಳಬಾರದು. ಪ್ರಳಯ ಸ್ಥೂಲವಾಗಿ ಎಂದಿಗೂ ನಡೆಯುವುದಿಲ್ಲ. ಹುಟ್ಟಿರುವುದೆಲ್ಲಾ ನಾಶವಾಗುವುದನ್ನು 'ಪ್ರಳಯ' ಎನ್ನುತ್ತೇವೆ. ಹುಟ್ಟಿರುವುದೆಲ್ಲಾ ನಾಶವಾಗುವುದು ನಿಜವೇ ಆದರೂ, ಅದು ಹೊರಗಿನ ಪ್ರಪಂಚದಲ್ಲಿ ನಡೆಯುವುದಿಲ್ಲ. ಹೊರಗಿನ ಪ್ರಪಂಚದಲ್ಲಿ ಪ್ರಕೃತಿಗೆ ಸಂಬಂಧಿಸಿ ಕೆಲವು ಪ್ರಕೃತಿ ವೈಪರಿತ್ಯಗಳು ನಡೆಯಬಹುದಾಗಲೀ, ಪ್ರಳಯ ಬರುವುದಿಲ್ಲ. ಪ್ರಕೃತಿ ಸಂಬಂಧ ವಿಪತ್ತು, ಒಂದು ಪರಿಮಿತವಾದ ಸ್ವಲ್ಪ ಪ್ರಾಂತದಲ್ಲಿ ನಡೆಯುತ್ತದೆ. ಅಷ್ಟೇ ಹೊರತು ಪೂರ್ತಿಯಾಗಿ ಪ್ರಪಂಚವೆಲ್ಲಾ ಪ್ರಳಯ ನಡೆಯುವುದಿಲ್ಲ. ಅದೇ ವಿಷಯವನ್ನೇ **"ಕಲಿಯುಗ ಎಂದಿಗೂ ಯುಗಾಂತವಾಗದು"** ಎಂಬ ಗ್ರಂಥದಲ್ಲಿ ಬರೆದಿದ್ದೇವೆ. ಕಲಿ ಯುಗದಲ್ಲಿ ಪ್ರಳಯ ಬರುವುದಿಲ್ಲ, ಕಲಿಯುಗ 4,32,000 ವರ್ಷಗಳು ಮುಗಿದ ಕೂಡಲೇ ಕೃತಯುಗ ಪ್ರಾರಂಭವಾಗುವುದೆಂದು ಸಹ ನಾವು ಗ್ರಂಥದಲ್ಲಿ ಬರೆಯುವುದು ಸಹ ನಡೆದಿದೆ.

ಭೂಮಿ ಮೇಲೆ ಎರಡು ಪ್ರಕೃತಿಗಳಿವೆ. ಒಂದು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಆದಾಗ ಇವುಗಳನ್ನೇ ಪಂಚ ಭೂತಗಳು ಎನ್ನುತ್ತೇವೆ. ಎರಡನೆಯದು ಪಂಚಭೂತಗಳೆಲ್ಲವೂ ಒಂದರೊಂದಿಗೆ ಮತ್ತೊಂದು ಬೆರೆತು ತಯಾರಾದ ಶರೀರ ರೂಪವಾಗಿರುವ ಪ್ರಕೃತಿ. ಮೊದಲನೆಯದನ್ನು 'ಅಚರ ಪ್ರಕೃತಿ' ಎಂದು ಅನ್ನುತ್ತೇವೆ. ಎರಡನೆಯದನ್ನು 'ಚರಪ್ರಕೃತಿ' ಎನ್ನುತ್ತೇವೆ. ಅಚರ ಪ್ರಕೃತಿ ಎಂದರೇ ಬದಲಾಗದಂತಿರುವ ಪ್ರಕೃತಿಯೆಂದು ಹೇಳಬಹುದು. ಹಾಗೆಯೇ ಚರ ಪ್ರಕೃತಿಯೆಂದರೇ ಬದಲಾವಣೆ ಹೊಂದುವ ಪ್ರಕೃತಿಯೆಂದು ಅರ್ಥ. ಬದಲಾಗುವ ಪ್ರಕೃತಿಯಾದ ಚರ ಪ್ರಕೃತಿಯಾಗಿರುವ ಶರೀರ ಎಂದಿಗಾದರೂ ನಾಶವಾಗುವುದು ತಪ್ಪುವುದಿಲ್ಲ. ಒಂದು ದಿನ ಜೀರ್ಣವಾದ ದೇಹದಿಂದ ಜೀವಿಯು, ಆತ್ಮ ಎರಡೂ ಹೊರಗೆ ಹೋಗುತ್ತವೆ. ಜೀವಿಯು, ಆತ್ಮ ನಿವಾಸಯೋಗ್ಯವಲ್ಲದ ನಾಶವಾದ ಶರೀರದಿಂದ ಹೊರಗೆ ಹೋಗುವುದು

ಎಲ್ಲರಿಗೂ ತಿಳಿದ ವಿಷಯವೇ. ಸಾವನ್ನು **"ಒಂದು ಕಾಲಾವಧಿ"** ಎಂದು ಖುರಾನ್ ಗ್ರಂಥದಲ್ಲಿ ಸಹ ಹೇಳಿದ್ದಾರೆ. ಕಾಲಾವಧಿಯನ್ನೇ ಸಾವು ಅಥವಾ ಮರಣ ಎನ್ನುತ್ತಿದ್ದೇವೆ. ಮರಣವನ್ನೇ ಶರಿರದಲ್ಲಿ ನಡೆಯುವ ಪ್ರಳಯ ಎನ್ನುತ್ತಿದ್ದೇವೆ. ಶರೀರದಲ್ಲಿ ಯಾವುದೂ ಸರಿಯಾಗಿ ಇಲ್ಲದಂತೆ ಜೀರ್ಣಾವಸ್ಥೆಗೆ ಸೇರುವುದನ್ನು ಹುಟ್ಟಿರುವುದೆಲ್ಲಾ ನಾಶವಾದಂತೆ ಲೆಕ್ಕಿಸಿ ಅದನ್ನು ಪ್ರಳಯ ಎನ್ನುತ್ತಿದ್ದೇವೆ. ಶರೀರ ಪ್ರಳಯ ನಡೆದಾಗ ಎಂದರೆ ಮನುಷ್ಯ ಸತ್ತುಹೋದಾಗ ಕೂಡಲೇ ಜೀವಿಯು ಎರಡನೆಯ ಜನ್ಮಕ್ಕೆ ಹೋಗಬೇಕಾಗಿರುತ್ತದೆ. ಆಗ ಜೀವಿಯು ತಾಯಿಗರ್ಭದಿಂದ ಹೊರಬಂದ ಶರೀರದಲ್ಲಿ ಆತ್ಮ ಪ್ರವೇಶಿಸುವಂತೆ ಮಾಡಿದಾಗ, ಶಿಶುಶರೀರದಲ್ಲಿ ಜೀವಿಯು ಮೂರ್ಛೆ ಸ್ಥಿತಿಯಲ್ಲಿ ಇರುತ್ತಾನೆ. ಆಗ ಆತ್ಮ ಹೊರಗಿನ ಧ್ಯಾಸ ಉಂಟುಮಾಡಿದಾಗ ಶಿಶು ಶರೀರದಲ್ಲಿ ಮೂರ್ಛೆಯಿಂದ ಹೊರಗಿನ ಧ್ಯಾಸದೊಳಗೆ ಬರುವುದನ್ನು ಸಮಾಧಿಯಿಂದ ಹೊರಬೀಳುವುದು ಎಂದು ಹಿರಿಯರೆನ್ನುತ್ತಿದ್ದರು. ಇದು ವಾಸ್ತವವಾಗಿ ನಡೆಯುವ ತತಂಗವಾದಾಗ ಅದೇ ವಿಷಯವನ್ನೇ ಸೂಕ್ಷ್ಮಜ್ಞಾನವಾಗಿ ದೈವಗ್ರಂಥಗಳಲ್ಲಿ ತಿಳಿಸಿರುವಾಗ, ಮನುಷ್ಯ ಅದನ್ನು ಅರ್ಥ ಮಾಡಿಕೊಳ್ಳಲಾರದೇ ಹೋಗುವುದರಿಂದ ದೇವರು ಹೇಳಿದ ಜ್ಞಾನ ಮನುಷ್ಯನಿಗೆ ತಿಳಿಯದಂತೆ ಹೋಗಿದೆ. ದೈವಗ್ರಂಥಗಳು ನಮ್ಮ ಮುಂದಕ್ಕೆ ಬಂದು ಇಷ್ಟು ಕಾಲವಾದರೂ ಒಬ್ಬರೂ ಸಹ ದೇವರು ಹೇಳಿದ ನಿಜವಾದ ಜ್ಞಾನವು ನಮಗೆ ತಿಳಿಯಲಾರದೆ ಹೋಗಿದೆ. ಆದ್ದರಿಂದ ಪ್ರಳಯ ಎಂದರೇ ಹೊರಗೆ ನಡೆಯುವುದೆಂದೂ, ಸಮಾಧಿ ಎಂದರೇ ಭೂಗರ್ಭದೊಳಗಿನದೆಂದೂ ಹೇಳುತ್ತಿದ್ದಾರೆ. ಹಾಗೆ ಹೇಳಿದರೇ ಎಂದಿಗೂ ದೇವರ ಜ್ಞಾನ ಅರ್ಥವಾಗುವುದಿಲ್ಲ.

ಮರಣದ ನಂತರ ಜೀವನವಿದೆಯೆಂದು ದೈವಗ್ರಂಥದಲ್ಲಿ ಇದ್ದರೂ, ಅದು ಪ್ರಳಯದ ನಂತರ ಬರುತ್ತದೆಂದೂ, ಅದು ಸ್ವರ್ಗನರಕಗಳೊಂದಿಗೆ ಕೂಡಿಕೊಂಡಿದೆಯೆಂದೂ ಬಹಳ ಜನ ಅಂದುಕೊಳ್ಳುವುದು ಸಹ ನಡೆಯುತ್ತಿದೆ. ಮರಣದ ನಂತರ ಕೂಡಲೇ ಹುಟ್ಟಿ ಪುನಃ ಜೀವಿಸುವುದೇ 'ಮರಣದ ನಂತರ

ಜೀವನವೆಂದು' ಬಹಳ ಮಂದಿ ಅರ್ಥ ಮಾಡಿಕೊಳ್ಳಲಾರದಂತಿದ್ದಾರೆ. ಮರಣಾನಂತರ ಜೀವನದಲ್ಲಿ ಸ್ವರ್ಗನರಕಗಳಿವೆಯೆಂದು ಸ್ವರ್ಗನರಕಗಳನ್ನು ಕುರಿತು ಹೇಳುವುದು ನಡೆದಿದೆ. ಮರಣದ ನಂತರ ಬಂದಿರುವ ಜೀವನ ಮೊದಲ ಜನ್ಮದಲ್ಲಿರುವ ಜೀವನದ ಹಾಗೆಯೆ ಇರುತ್ತದೆ. ಗತ ಜನ್ಮದಲ್ಲಿ ಸಂಪಾದಿಸಿಕೊಂಡ ಪಾಪಪುಣ್ಯಗಳನ್ನು ಈ ಜನ್ಮದಲ್ಲಿ ಅನುಭವಿಸಬೇಕಾಗಿರುತ್ತದೆ. ಈ ವಿಧವಾಗಿ ಒಂದು ಜನ್ಮದಲ್ಲಿ ಮಾಡಿದ ಪಾಪಪುಣ್ಯಗಳು ಕರ್ಮಚಕ್ರದಲ್ಲಿ ಆತ್ಮ ನೆಲೆಸುವಂತೆ ಮಾಡುತ್ತಿದೆ. ಅದನ್ನೇ ಒಂದು ಸಂದರ್ಭದಲ್ಲಿ 'ಕರ್ಮಪತ್ರ' ಎಂದು ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ಜನ್ಮಜನ್ಮಗಳಲ್ಲಿಯೂ ಏರ್ಪಡುವ ಕರ್ಮಪ್ರಕಾರ ಎರಡನೆಯ ಜನ್ಮಗಳಲ್ಲಿ ಬದುಕನ್ನು ಸಾಗಿಸಬೇಕಾಗಿದೆ. ಕರ್ಮಪ್ರಕಾರ ಜೀವನದಲ್ಲಿ ಎಷ್ಟೋ ಒಳ್ಳೆಯ ಕೆಟ್ಟ ಸಂಘಟನೆಗಳು, ಎಷ್ಟೋ ಸುಖ ದುಃಖಗಳು ನಡೆಯುತ್ತಿರುತ್ತವೆ. ಕರ್ಮಪ್ರಕಾರ ಪುಣ್ಯ ಅನುಭವಕ್ಕೆ ಬಂದಾಗ ಅವನಿಗೆ ಅದರಿಂದ ಸುಖಗಳು ಏರ್ಪಡುತ್ತವೆ. ಅದು ಮುಗಿದ ಕೂಡಲೇ ಪಾಪ ಅನುಭವಕ್ಕೆ ಬಂದಾಗ ಮನುಷ್ಯನಿಗೆ ಕಷ್ಟಗಳು, ದುಃಖಗಳು ಏರ್ಪಡುತ್ತಿವೆ. ಯಾವಾಗ ಸುಖಗಳು ಬರುತ್ತಿವೆಯೋ ಆಗ ಅವನು ಸ್ವರ್ಗವನ್ನು ಅನುಭವಿಸಿದಂತಾಗುತ್ತದೆ. ಹಾಗೆಯೇ ಯಾವಾಗ ಕಷ್ಟಗಳು, ಬಾಧೆಗಳನ್ನು ಮನುಷ್ಯ ಅನುಭವಿಸುತ್ತಿರುವನೋ ಆಗ ಅವನು ನರಕವನ್ನು ಅನುಭವಿಸಿ ದಂತಾಗುತ್ತದೆ.

ಜೀವನ ಕೆಲವು ವರ್ಷಗಳ ದೂರದ ಪ್ರಯಾಣ. ಅದರಲ್ಲಿ ಆಗಾಗ ಅವನು ಮಾಡಿಕೊಂಡ ಗತ ಕರ್ಮಗಳನ್ನನುಸರಿಸಿ ಕೆಲವು ಬಾರಿ ಸುಖಗಳು, ಕೆಲವು ಬಾರಿ ಕಷ್ಟಗಳು ಏರ್ಪಡುತ್ತಿರುತ್ತವೆ. ಆದ್ದರಿಂದ 'ಜೀವನ ಸುಖ ದುಃಖಗಳ ಸಂಗಮ' ಎಂದು ಹಿರಿಯರು ಹೇಳಿದ್ದಾರೆ. ಮನುಷ್ಯ ಎಂದಿಗೂ ತನ್ನ ಜೀವನದಲ್ಲಿ ಒಂದೇಸಮ ಸ್ವರ್ಗವನ್ನು ಅನುಭವಿಸುವುದಿಲ್ಲ, ಹಾಗೆಯೇ ಒಂದೇಸಮ ದುಃಖಗಳಿಂದ ಕೂಡಿಕೊಂಡ ನರಕವನ್ನು ಅನುಭವಿಸುವುದಿಲ್ಲ. ಸ್ವರ್ಗ ನರಕಗಳು ಎಂಬ ಶಬ್ದಗಳೆರಡು ಸುಖದುಃಖಗಳನ್ನು ಗುರುತಿಸುವಂತಹ ಪದಗಳೇ ಹೊರತು

ಅವು ಪ್ರತ್ಯೇಕವಾದ ಲೋಕಗಳಲ್ಲ. ಈದಿನ ಬಹಳ ಜನರು ದೇವರು ಹೇಳಿದ ಜ್ಞಾನವನ್ನು ಬಿಟ್ಟು ಮನುಷ್ಯರು ಹೇಳಿದ ಜ್ಞಾನವನ್ನೇ ಅನುಸರಿಸುತ್ತಾ, ಸ್ವರ್ಗ ನರಕಗಳು ಎರಡು ಬೇರೆಬೇರೆ ಲೋಕಗಳಾಗಿ ಅರ್ಥ ಮಾಡಿಕೊಂಡಿದ್ದಾರೆ. ಹಾಗೆ ಬೇರೆ ಬೇರೆ ಲೋಕಗಳು ಎಲ್ಲಿಯೋ ಇಲ್ಲ. ಹಾಗೆ ಅರ್ಥ ಮಾಡಿಕೊಳ್ಳು ವುದು ಅಜ್ಞಾನವಾಗುತ್ತದೆ. ದೇವರು ಹುಟ್ಟುವಿಕೆಯನ್ನು ಕೊಟ್ಟಿದ್ದಾನೆ ಹಾಗೆಯೇ ಮರಣವನ್ನು ಒಂದು ಕಾಲಾವಧಿಯಾಗಿ ನಿರ್ಣಯಿಸಿದ್ದಾನೆ. ಆ ಕಾಲಾವಧಿಯ ಪ್ರಕಾರ ಆತನಿಗೆ ಮರಣವನ್ನು ಉಂಟುಮಾಡುತ್ತಿದ್ದಾನೆ. ನಂತರ ಮೊದಲಿನ ಹಾಗೆ ಎರಡನೆಯ ಜೀವನವನ್ನು ಸಹ ಪ್ರಸಾದಿಸುತ್ತಿದ್ದಾನೆಂದು ಅಂತಿಮ ದೈವಗ್ರಂಥದಲ್ಲಿ ಎಷ್ಟೋ ವಿವರವಾಗಿ ಹೇಳಿರುವಾಗ, ಅದನ್ನು ಮನುಷ್ಯರು ತಪ್ಪಾಗಿ ಅರ್ಥಮಾಡಿಕೊಂಡು ಮರಣದ ನಂತರ ಮನುಷ್ಯ ಹುಟ್ಟುವುದಿಲ್ಲವೆಂದು ಎನ್ನುತ್ತಿದ್ದಾರೆ. ಮರಣದ ನಂತರ ಜೀವನ ಮೊದಲನೆಯ ಜನ್ಮದಂತೆ ಸುಖದುಃಖಗಳಿಂದ ಕೂಡಿಕೊಂಡಿದೆಯೆಂದು ದೇವರು ತನ್ನ ಗ್ರಂಥದಲ್ಲಿ ಅದನ್ನೇ ಹೇಳಿದ್ದಾನೆಂದು ತಿಳಿಯಲಾಗದೇ ಹೋಗಿದ್ದಾರೆ. ಆದ್ದರಿಂದ "ಮನುಷ್ಯನು ಒಂದೇ ಬಾರಿ ಹುಟ್ಟಿ ಒಂದೇ ಬಾರಿ ಸತ್ತುಹೋಗುವನು, ನಂತರ ಜನ್ಮಗಳೆನ್ನುವವು ಯಾವುವು ಇಲ್ಲ. ಪ್ರಳಯದ ನಂತರ ದೇವರು ಮನುಷ್ಯನನ್ನು ಸಮಾಧಿಯಿಂದ ಎಬ್ಬಿಸಿ ಅವನ ಕರ್ಮವನ್ನು ಅನುಸರಿಸಿ ಕೆಲವರಿಗೆ ಸ್ವರ್ಗವನ್ನು, ಕೆಲವರಿಗೆ ನರಕವನ್ನು ಕೊಡುತ್ತಿದ್ದಾನೆಂದು" ಹೇಳಿಕೊಳ್ಳುವುದು ನಡೆಯುತ್ತಿದೆ. ಸ್ವರ್ಗಕ್ಕೆ ಹೋದವನು ಶಾಶ್ವತವಾಗಿ ಆ ಲೋಕದಲ್ಲಿ ಸುಖಗಳನ್ನು ಅನುಭವಿಸುತ್ತಿರುವ ನೆಂದು ಮನುಷ್ಯನಿಗೆ ಸ್ವರ್ಗದ ಮೇಲೆ ಆಸೆ ಉಂಟಾಗುವಂತೆ ಸ್ವರ್ಗವನ್ನು ವರ್ಣಿಸಿ ಹೇಳಿದ್ದಾರೆ.

ವಾಸ್ತವವಾಗಿ ಹೇಳಿದರೇ ಸ್ವರ್ಗ ನರಕಗಳೆನ್ನುವವು ಪ್ರತ್ಯೇಕ ಲೋಕಗಳಾಗಿ ಇಲ್ಲ. ಆದರೇ ಮನುಷ್ಯರು ಪೂರ್ವದಿಂದ ಸ್ವರ್ಗ ನರಕಗಳೆನ್ನುವವು ಪ್ರತ್ಯೇಕ ಲೋಕಗಳೆಂದು ಹೇಳುತ್ತಾ ಬರುತ್ತಿದ್ದಾರೆ. ಐದು ಸಾವಿರ ವರ್ಷಗಳ ಪೂರ್ವದಲ್ಲಿ ಇತರ ಮತಗಳು ಇಲ್ಲದ ಕಾಲದಲ್ಲಿ ಇಂದೂ (ಹಿಂದೂ)

ಸಮಾಜ ಒಂದೇ ಇರುವ ಕಾಲದಲ್ಲಿ ಸ್ವರ್ಗನರಕಗಳನ್ನು ಕುರಿತು ಚೆನ್ನಾಗಿ ಪ್ರಚಾರವಾಗಿದೆ. ಸ್ವರ್ಗಲೋಕಕ್ಕೆ ಇಂದ್ರನು ರಾಜನೆಂದೂ, ನರಕಲೋಕಕ್ಕೆ ಯಮನು ರಾಜನೆಂದೂ ಹೇಳುತ್ತಿದ್ದರು. ಹಾಗೆಯೇ ಪುರಾಣ ಗ್ರಂಥಗಳಲ್ಲಿ ಬರೆಯುವುದರಿಂದ, ಕಥೆಗಳ ರೂಪದಲ್ಲಿ ಹೇಳುವುದರಿಂದ, ಎಲ್ಲರ ಮನೋಭಾವನೆಗಳಲ್ಲಿ ಸ್ವರ್ಗನರಕಗಳು ಎರಡೂ ಪ್ರತ್ಯೇಕವಾದ ಲೋಕಗಳಾಗಿ ಇವೆಯೆಂದು ಮುದ್ರಿಸಿಕೊಂಡಿದ್ದಾರೆ. ಸಾವಿತ್ರಿ ಪುರಾಣದಲ್ಲಿ ಸಾವಿತ್ರಿ ತನ್ನ ಪತಿಯ ಪ್ರಾಣಗಳಿಗಾಗಿ ಯಮಧರ್ಮ ರಾಜನ ಹಿಂದೆ ಸುಮಾರು ಯಮಲೋಕದ ಹತ್ತಿರದವರೆಗೂ ಹೋಗಿದ್ದಾಳೆಂದೂ, ಕೊನೆಗೆ ಯಮಧರ್ಮ ರಾಜನಿಂದ ತನ್ನ ಪತಿಯ ಪ್ರಾಣಗಳನ್ನು ಬಿಡಿಸಿ ತಂದುಕೊಂಡಿದ್ದಾಳೆಂದೂ, ನಾಟಕಗಳ ರೂಪದಲ್ಲಿ ಎಲ್ಲ ಊರುಗಳಲ್ಲಿ ಪ್ರದರ್ಶಿಸುವುದರಿಂದ ಅಂದಿನ ಕಾಲದಲ್ಲಿ ನರಕ ಲೋಕವಿದೆಯೆಂದು ಚೆನ್ನಾಗಿ ಪ್ರಚಾರವಾಗಿದೆ. ಅದಕ್ಕೆ ಜೊತೆಯಾಗಿ ಎಷ್ಟೋ ಪುರಾಣಗಳಲ್ಲಿ ಸ್ವರ್ಗ ನರಕ ಲೋಕಗಳ ಪ್ರಸಕ್ತಿ ಬರುವುದರಿಂದ, ಸ್ವರ್ಗನರಕಗಳೆನ್ನುವವು ಪ್ರತ್ಯೇಕ ಲೋಕಗಳಾಗಿ ಇವೆಯೆಂದು ಎಲ್ಲರಲ್ಲಿ ಪೂರ್ತಿ ವಿಶ್ವಾಸ ಏರ್ಪಟ್ಟಿತು. ನಂತರ ಸ್ವಲ್ಪ ಕಾಲಕ್ಕೆ ಬಂದಿರುವ ಕ್ರೈಸ್ತವ ಮತದಲ್ಲಿಯೂ, ಇಸ್ಲಾಮ್‌ದಲ್ಲಿಯೂ ಸ್ವರ್ಗ ನರಕಗಳ ಸ್ಥಾನಗಳು ಹಾಗೆಯೇ ಇರುವಂತೆ ಅವರೂ ಸಹ ಸ್ವರ್ಗ ನರಕಗಳನ್ನು ಕುರಿತು ಹೇಳಿಕೊಳ್ಳುವುದು ನಡೆದಿದೆ. ಅಷ್ಟೇ ಅಲ್ಲದೆ ಎಷ್ಟೋ ಆಧ್ಯಾತ್ಮಿಕ ಗುರುಗಳು ಎಲ್ಲ ಮತಗಳಲ್ಲಿಯೂ ಸ್ವರ್ಗನರಕಗಳ ಕಥೆಗಳನ್ನು ಹೇಳುವುದರಿಂದ, ಅವರ ಮಾತನ್ನು ಮೀರಿ ಆಲೋಚನೆ ಮಾಡಲಾಗದವರು ಎಲ್ಲರೂ ಸ್ವರ್ಗ ನರಕಗಳು ಪ್ರತ್ಯೇಕ ಲೋಕಗಳಾಗಿ ಇವೆಯೆಂದು ವಿಶ್ವಾಸಿಸಿದ್ದಾರೆ.

ಪ್ರತ್ಯಕ್ಷವಾಗಿ ನಡೆಯುವ ತಮ್ಮ ಜೀವನದಲ್ಲಿ ಸ್ವರ್ಗಗಳ ಗುರುತುಗಳಾದ ಸುಖಗಳನ್ನು ಅನುಭವಿಸುತ್ತಿದ್ದರೂ, ಇದು ಸ್ವರ್ಗವಲ್ಲವೆ! ಎಂದು ಗ್ರಹಿಸಲಾರದೆ ಹೋಗಿದ್ದಾರೆ. ಹಾಗೆಯೇ ತಮ್ಮ ಜೀವನದಲ್ಲಿ ಪ್ರತ್ಯಕ್ಷವಾಗಿ ನರಕಕ್ಕೆ ಗುರುತುಗಳಾದ ದುಃಖಗಳನ್ನು ಅನುಭವಿಸುತ್ತಿದ್ದರೂ, ಇದೆಲ್ಲವೂ ನರಕವಲ್ಲವೇ! ಎಂದು

ಗ್ರಹಿಸಲಾರದೇ ಹೋಗಿದ್ದಾರೆ. ಅದರಿಂದ ಎಲ್ಲರಲ್ಲಿ ಸ್ವರ್ಗನರಕಗಳು ಪ್ರತ್ಯೇಕವಾಗಿ ಇವೆಯೆಂದು, ಪುಣ್ಯ ಮಾಡಿದವನು ಸ್ವರ್ಗಕ್ಕೆ ಹೋಗಿ ಸುಖಗಳನ್ನು ಅನುಭವಿಸಿ ನಂತರ ಪಾಪವನ್ನು ಅನುಭವಿಸುವುದಕ್ಕೆ ನರಕಕ್ಕೆ ಹೋಗಿ ಅಲ್ಲಿ ಪಾಪವೆಲ್ಲವೂ ಮುಗಿದ ನಂತರ ಪುನಃ ಭೂಮಿಮೇಲೆ ಹುಟ್ಟುವನೆಂದು ಎಷ್ಟೋ ಪುರಾಣಗಳಲ್ಲಿ ಇರುವುದರಿಂದ ಅದನ್ನೇ ನಿಜವೆಂದು ಎಲ್ಲರೂ ನಂಬಿದ್ದಾರೆ. ಆದ್ದರಿಂದ ಎಲ್ಲರ ಹೃದಯಗಳಲ್ಲಿ ಸ್ವರ್ಗನರಕಗಳು ಪ್ರತ್ಯೇಕ ಲೋಕಗಳಾಗಿ ಇವೆಯೆಂದು ಎಲ್ಲರಿಗೂ ಪೂರ್ತಿ ನಂಬಿಕೆ ಏರ್ಪಟ್ಟಿದೆ. ಆದರೇ ವಾಸ್ತವಕ್ಕೆ ಸ್ವರ್ಗನರಕಗಳು ಪ್ರತ್ಯೇಕ ಲೋಕಗಳಾಗಿ ಇಲ್ಲವೆಂದು ಯಾರೂ ಗ್ರಹಿಸಲಿಲ್ಲ. ದೈವಗ್ರಂಥಗಳಲ್ಲಿ ಅವುಗಳ ಪ್ರಸ್ತಾವನೆ ಬಂದರೂ, ಅವುಗಳನ್ನು ತಮ್ಮ ಜೀವನದಲ್ಲೇ ನಡೆಯುವ ಕ್ರಿಯೆಗಳೆಂದೂ, ಅವುಗಳಲ್ಲೇ ಸುಖದುಃಖಗಳು ಜೀವನದಲ್ಲಿ ಏರ್ಪಡುತ್ತಿವೆ ಯೆಂದೂ, ಅರ್ಥಮಾಡಿಕೊಳ್ಳದೇ ದೈವಗ್ರಂಥಗಳಲ್ಲಿನ ಮಾತುಗಳನ್ನು ಸಹ ಬೇರೆಯಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಅದರಿಂದ ಮರಣದ ನಂತರ ಜೀವನ ಸ್ವರ್ಗದಲ್ಲೋ ಅಥವಾ ನರಕದಲ್ಲೋ ಇರುತ್ತದೆಂದು ನಂಬುತ್ತಿದ್ದಾರೆ. ಮರಣದ ನಂತರ ಬಂದಿರುವ ಸ್ವರ್ಗ ನರಕಗಳಲ್ಲಿಯೇ ಮನುಷ್ಯರು ಶಾಶ್ವತವಾಗಿ ಇರುತ್ತಾರೆಂದು ಹೇಳುವವರೆಲ್ಲರೂ ಮರಣದ ನಂತರ ಜೀವನವಿದೆಯೆಂದು ಹೇಳುತ್ತಿದ್ದಾರೆ. ಆದರೇ ಆ ಜೀವನ ಇಲ್ಲೇ ಇದೆಯೆಂದೂ, ಇಲ್ಲಿ ಭೂಮಿಮೇಲೆ ನಡೆಯುವ ಜೀವನದಲ್ಲೇ ಸ್ವರ್ಗನರಕಗಳೆರಡನ್ನೂ ಸೇರಿಸಿ ಅನುಭವಿ ಸುತ್ತಿದ್ದಾರೆಂದು ತಿಳಿಯಲಾರದೆ ಹೋಗುತ್ತಿದ್ದಾರೆ.

ಎಷ್ಟೋ ಗಾಢವಾಗಿ ಈದಿನ ಸ್ವರ್ಗನರಕಗಳು ಎಲ್ಲೋ ಇವೆಯೆಂದು ಕೊಳ್ಳುವ ಮನುಷ್ಯರಿಗೆ ನಿಜವಾದ ದೈವಜ್ಞಾನ ಇದುಯೆಂದು ನಾವು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲದವರು, ಸನಾತನ ಧರ್ಮಗಳಿಗೆ ಭಂಗವನ್ನುಂಟು ಮಾಡುತ್ತಿದ್ದೇ ವೆಂದು ನಮ್ಮ ಮೇಲೆ ಆಪಾದನೆ ಮಾಡುವುದಲ್ಲದೆ, ಎಷ್ಟೋ ಗಾಢವಾಗಿ ದೂಷಿಸುವವರೂ ಸಹ ಇದ್ದಾರೆ. ಆದ್ದರಿಂದ ಮನುಷ್ಯನಲ್ಲಿನ ಅಜ್ಞಾನವನ್ನು ತೆಗೆದುಹಾಕುವುದು ದುಸ್ಸಾಧ್ಯವೆಂದು ತಿಳಿದುಹೋಗಿದೆ. ಆದರೇ

ನಾವು ಹೇಳುವ ಬೋಧನೆ ಎಲ್ಲರಿಗೂ ಅಲ್ಲ, ನನ್ನ ಮಾತಿನ ಮೇಲೆ ನಂಬಿಕೆ ಇರುವವರಿಗೆ ಮಾತ್ರವೇಯೆಂದು ಹೇಳುತ್ತಿದ್ದೇವೆ. ಸನಾತನ ಧರ್ಮವೆಂದರೇ ಏನೋ ತಿಳಿಯದವರು ಅಜ್ಞಾನ ಬೋಧೆಗಳನ್ನು ಸನಾತನ ಧರ್ಮ ವೆಂದುಕೊಳ್ಳುತ್ತಿದ್ದಾರೆ. ನಾವು ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಎಷ್ಟೋ ಹೊಸ ರಹಸ್ಯಗಳೊಂದಿಗೆ ಅಸಲಾದ ಆಧ್ಯಾತ್ಮಿಕ ಶರೀರದಲ್ಲೇ ಇದೆಯೆಂದೂ, ಆತ್ಮಜ್ಞಾನವನ್ನು ತಿಳಿಯಬೇ ಕೆಂದರೇ ಶರಿರದಲ್ಲಿ ಆತ್ಮವನ್ನು ಕುರಿತು ತಿಳಿಯಬೇ ಕೆಂದೂ, ಶರೀರ ಯಂತ್ರಾಂಗವೆಲ್ಲಾ ಹೇಗೆ ನಡೆಯುತ್ತಿದೆಯೋ ತಿಳಿಯುವು ದಾದರೇ ಅಸಲಾದ ಆಧ್ಯಾತ್ಮಿಕವೆಲ್ಲಾ ತಿಳಿದುಹೋಗುತ್ತದೆಂದು ಹೇಳುತ್ತಿದ್ದೇವೆ. ನಾವು ನಮ್ಮ ಬೋಧನೆಗಳಲ್ಲಿ ಶರೀರಾಂತರ್ಗತ ಸಮಾಚಾರವನ್ನು ಹೊರತು ಇತರ ಜ್ಞಾನವನ್ನು ಬೋಧಿಸುತ್ತಿಲ್ಲ. ಆದರೇ ಅಜ್ಞಾನಿಗಳು ರಾಮನು ದೇವರೆಂದು ನೀವು ಹೇಳಲಿಲ್ಲವೇಯೆಂದು ಕೆಲವರೂ, ಅಮ್ಮನವರೇ ಆದಿಪರಾಶಕ್ತಿಯೆಂದು ಹೇಳಲಿಲ್ಲವೇಯೆಂದು ಕೆಲವರೂ ನಮ್ಮೊಂದಿಗೆ ವಾದನೆಗೆ ಇಳಿಯುತ್ತಿದ್ದಾರೆ. ಕೆಲವರಾದರೇ ನೇರವಾಗಿ ಇದು ಹಿಂದುಗಳ ಜ್ಞಾನವೇ ಅಲ್ಲ ಎಂದು ಅನ್ನುತ್ತಿದ್ದಾರೆ.

ನಾನು ಇಂದೂವಾಗಿ ಹುಟ್ಟಿದ್ದೇನೆ, ಎಲ್ಲ ಮತಗಳ ಸಾರ ನನಗೆ ಅರ್ಥವಾಗಿದೆ. ಯಾವ ಒಂದು ಮತದಲ್ಲಿಯೂ ಸಹ ಇತರ ಮತದೊಳಗಿನವ ರನ್ನು ಗೌರವಿಸುವ ಮತಸಾಮರಸ್ಯ ಇಲ್ಲವೆಂದು ತಿಳಿದುಹೋಗಿದೆ. ಎಲ್ಲರಿಗೂ ಒಬ್ಬನೇ ದೇವರು ಆದಾಗ ಈ ಮತದ್ವೇಷಗಳು ಯಾಕೆ? ಎಂಬ ಪ್ರಶ್ನೆಗೆ ಉತ್ತರವಾಗಿ ಎಲ್ಲರ ದೇವರು ಒಬ್ಬನೇ, ಎಲ್ಲರ ಜ್ಞಾನ ಒಂದೇ ಎನ್ನುವುದಕ್ಕೆ ನಿರೂಪಣೆಯಾಗಿ ದೈವಗ್ರಂಥದಲ್ಲಿನ ವಾಕ್ಯಗಳನ್ನೇ ನಾವು ಎಲ್ಲರಿಗು ತಿಳಿಸುವುದು ನಡೆದಿದೆ. ಮೊದಲು ಹುಟ್ಟಿರುವುದು ಸನಾತನವಾಗಿದೆ. ಮಧ್ಯದಲ್ಲಿ ಬಂದಿರುವುದು ಅದೇ ಜ್ಞಾನವಾದರೂ ಮನುಷ್ಯರು ಅರ್ಥಮಾಡಿಕೊಳ್ಳಲಾರದೇ ಒಂದೇ ಜ್ಞಾನವನ್ನೇ ಕೊನೆಗೆ ಮೂರು ವಿಧಗಳ ಮತಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಮೊದಲು ಹೇಳಿದ ಭಗವದ್ಗೀತಾ ಜ್ಞಾನವೇ ತಮ್ಮಲ್ಲಿ ಇದೆಯೆಂದೂ, ಅದನ್ನೆ

ನಾವು ಧೃಢೀಕರಿಸುತ್ತಿದ್ದೇವೆಂದು ಖುರಾನ್ ಗ್ರಂಥದಲ್ಲಿ ಐದನೇ ಸೂರಾದಲ್ಲಿ ಹೇಳಿದ್ದರೂ ಆ ಮಾತನ್ನು ಕುರಿತು ಯಾರೂ ಹಿಡಿಸಿಕೊಳ್ಳುತ್ತಿಲ್ಲ. ಮೂರು ಮತಗಳಲ್ಲಿ, ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿದ್ದರೂ ಅದನ್ನು ಗ್ರಹಿಸಿಕೊಳ್ಳುವ ಸ್ಥಿತಿಯಲ್ಲಿ ಮೂರು ಮತದವರು ಇಲ್ಲ. ಬೆಳಗ್ಗೆ ಎದ್ದಾಗಿನಿಂದ ದೇವರು ಹೇಳಿದ ಜ್ಞಾನವನ್ನು ನೋಡೋಣವೆಂದು ಅಂದುಕೊಳ್ಳದೇ ಮತದ್ವೇಷಗಳ ಕಡೆಗೇ ಪ್ರಜೆಗಳು ಪ್ರಯಾಣಿಸುತ್ತಿದ್ದಾರೆ. ಅಂತಹವರ ದೃಷ್ಟಿಯಲ್ಲಿ ಮೂರು ಮತಗಳಲ್ಲಿನ ಜ್ಞಾನ ವಿವರಗಳನ್ನು ಹೇಳುವ ನಮ್ಮಂತಹವರನ್ನು ಸಹ ಅವರ ಮತದ್ವೇಷಗಳಿಗೆ ಸೇರಿಸುತ್ತಿದ್ದಾರೆ. ಎಲ್ಲಾದರೂ ಯಾವ ಮತಗ್ರಂಥದಲ್ಲಾದರೂ ದೇವರ ಜ್ಞಾನವನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದರೇ, ಅಲ್ಲಿ ಹಾಗೆ ಅರ್ಥ ಮಾಡಿಕೊಳ್ಳಬಾರದೆಂದು ಹೇಳಿ, ಅದಕ್ಕೆ ನಿಜಾರ್ಥವನ್ನು ನಾವು ತಿಳಿಸುತ್ತಿರುವುದರಿಂದ, ನಮ್ಮ ತಪ್ಪುಗಳನ್ನು ಸರಿಪಡಿಸಿ ಹೇಳುತ್ತಿದ್ದಾರೆಂದು ಸಂತೋಷಪಡದೇ, ನಮ್ಮ ತಪ್ಪುಗಳನ್ನು ಹೊರಗಿಡುತ್ತಿದ್ದಾನೆಂದು ಅಸೂಯೆಪಡುವವರೇ ಹೆಚ್ಚಾಗಿಹೋಗಿದ್ದಾರೆ. ಭಗವದ್ಗೀತೆಯಲ್ಲಿ ಹಿಂದೂಗಳು ತಪ್ಪಾಗಿ ಅರ್ಥ ಮಾಡಿಕೊಂಡಿರುವುದನ್ನು ಅದು ಸರಿಯಾದ ಭಾವವಲ್ಲ, ಇದು ಸರಿಯಾದ ಭಾವವೆಂದು ವಿವರವಾಗಿ ತಿಳಿಸಿ ಹೇಳಿದರೇ ಅವರು ಸಂತೋಷಪಡದೇ ಅಸೂಯೆಯಿಂದ ನೋಡುತ್ತಿದ್ದಾರೆ. ಉಳಿದ ಮತದವರೂ ಸಹ ಅದೇ ರೀತಿಯಲ್ಲಿ ತಯಾರಾಗಿದ್ದಾರೆ. ಯಾರು ಹೇಗೆ ಭಾವಿಸಿಕೊಂಡು ನೋಡಿದರೂ ನಾವು ದೇವರ ಸೇವೆ ಮಾಡಬೇಕೆಂಬ ನಿರ್ಣಯದಿಂದ ನಿಜ ಜ್ಞಾನವನ್ನು ತಿಳಿಸುವುದೇ ದೇವರಿಗೆ ಸೇವೆ ಮಾಡಿದಂತೆಯೆಂದು ತಿಳಿಯುತ್ತಿದ್ದೇವೆ. ಆದ್ದರಿಂದ ಯಾರು ಏನೆಂದುಕೊಂಡರೂ, ಎಲ್ಲಾದರೇ ದೇವರ ಜ್ಞಾನ ಅಡ್ಡದಾರಿಯಲ್ಲಿ ನಡೆಯುತ್ತಿದೆಯೋ, ಅಲ್ಲಿ ಸರಿಪಡಿಸಿ ಅದನ್ನು ಸರಿಯಾದ ದಾರಿಯಲ್ಲಿ ಇಡುವುದೇ ನಮ್ಮ ಕರ್ತವ್ಯವಾಗಿ ಇಟ್ಟುಕೊಂಡಿದ್ದೇವೆ.

ಮೂರು ದೈವಗ್ರಂಥಗಳಲ್ಲಿಯೂ ಒಂದೇ ಜ್ಞಾನವಿದ್ದಾಗ ಅದು ಎಲ್ಲರಿಗೂ ಸುಲಭವೇ ಆಗುತ್ತದೆ. ಆದರೇ ನಮ್ಮದು ಬೇರೆ ಜ್ಞಾನ, ನಿಮ್ಮದು

ಬೇರೆ ಜ್ಞಾನವೆಂದು ಅಂದುಕೊಳ್ಳುವುದರಿಂದ ಅದು ದಾರಿ ತಪ್ಪಿಹೋಗಿದೆ. ಯಾರಷ್ಟಕ್ಕೆ ಅವರು ಹೇಳಿರುವುದನ್ನು ಸಮರ್ಥಿಸಿಕೊಳ್ಳುತ್ತಿದ್ದಾರೆ. ಹಾಗೆ ಸಮರ್ಥಿಸಿಕೊಳ್ಳುವುದರಲ್ಲಿ ಯಾರ ಜ್ಞಾನವನ್ನು ಅವರು ಮರೆತುಹೋಗಿ ನಮ್ಮ ದೇವರೇ ಬೇರೆ ಎನ್ನುತ್ತಿದ್ದಾರೆ. ಎಲ್ಲರ ದೇವರು ಒಬ್ಬನೇ ಎಂಬ ಮಾತನ್ನು ಮರೆತುಹೋಗಿದ್ದಾರೆ. ನಾವು ಮೂರು ಗ್ರಂಥಗಳಲ್ಲಿನ ಸೂಕ್ಷ್ಮ ಜ್ಞಾನವನ್ನು ಗ್ರಹಿಸಿ ದೇವರು ಹೇಳಿದ ಜ್ಞಾನ ಹೊರಗೆ ಇಲ್ಲವೆಂದೂ, ಶರೀರದಲ್ಲೇ ಇದೆಯೆಂದು ತಿಳಿದು ಶರೀರ ಅಂತರ್ಮುಖ ಜ್ಞಾನವನ್ನೇ ಹೇಳುತ್ತಿದ್ದೇವೆ. ಹಾಗೆ ಹೇಳುವು ದರಿಂದ ದೇವರ ಜ್ಞಾನದಲ್ಲಿನ ವಾಸ್ತವ ಸುಲಭವಾಗಿ ತಿಳಿಯುತ್ತಿದೆ. ದೇವರು ಸೃಷ್ಟ್ಯಾದಿಯಲ್ಲಿ "ಭೂಮಿ ಆಕಾಶಗಳನ್ನು ಮತ್ತು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಸೃಷ್ಟಿಸಿದನು" ಎಂದು ಇದೆ. ಅಲ್ಲಿ ಆ ವಾಕ್ಯಕ್ಕೆ ಸ್ಥೂಲವಾಗಿ ಅರ್ಥವನ್ನು ಹೇಳಿದರೇ 'ಆಕಾಶಗಳನ್ನು' ಬಹುವಚನವಾಗಿ ತೋರಿಸಲಾರೆವು. ಆ ವಾಕ್ಯವನ್ನು ಹೇಗಾದರೂಸರಿ ಸೂಕ್ಷ್ಮ ಅರ್ಥದಿಂದ ಹೇಳಿದಾಗಲೇ ನಿಜವಾದ ಭಾವ ತಿಳಿಯುತ್ತದೆ. ದೇವರು ಮೂರು ಗ್ರಂಥಗಳಲ್ಲಿ ಹೇಳಿದ ಜ್ಞಾನವೆಲ್ಲವನ್ನೂ ನಾವು ಸೂಕ್ಷ್ಮವಾಗಿ ಹೇಳುವುದರಿಂದ ನಮ್ಮ ಜ್ಞಾನ ಮೂರು ಮತಗಳವರಿಗೂ ಸಮನ್ವಯವಾಗಿದೆ, ಮತಸಾಮರಸ್ಯವನ್ನು ಉಂಟುಮಾಡುವುದದರೂ ಅದು ಪ್ರಜೆಗಳಿಗೆ ಅರ್ಥವಾಗಲಿಲ್ಲ. ನಮ್ಮನ್ನೂ ಕೂಡಾ ದ್ವೇಷಿಸುತ್ತಿದ್ದಾರೆ. ಹಿಂದೂ ಗಳಾದರೇ ಇತರ ಮತಗಳ ಬೋಧನೆಗಳನ್ನು ಪ್ರಚಾರ ಮಾಡುತ್ತಾ ಇತರ ಮತಗಳ ಅಭಿವೃದ್ಧಿಗೆ ಶ್ರಮಪಡುತ್ತಿದ್ದಾನೆಂದು ಎನ್ನುತ್ತಿದ್ದಾರೆ. ಇತರ ಮತ ಗಳವರಾದರೇ ನಮ್ಮನ್ನು ಹಿಂದೂಗಳಾಗಿ ಬದಲಾಯಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆಂದು ಅಂದುಕೊಳ್ಳುತ್ತಿದ್ದಾರೆ. **"ಮತಾಂತರಿಸುವುದು ದೈವ ದ್ರೋಹ"** ಎಂದು ನಾವು ಗ್ರಂಥವನ್ನು ಬರೆದರೂ ಅದನ್ನು ಯಾರೂ ಗ್ರಹಿಸಲಿಲ್ಲ. ನಾವು ಹೇಳುವ ಜ್ಞಾನವನ್ನು ಕೆಲವರು ತಿಳಿದಿದ್ದು ಎಷ್ಟೋ ದೊಡ್ಡ ಜ್ಞಾನ, ಸಾಮಾನ್ಯ ಮಾನವರು ಹೇಳುವಂತಹ ಜ್ಞಾನವಲ್ಲವೆಂದು ಹೊಗಳುತ್ತಿರುವಾಗ, ಬಹಳ ಮಂದಿ ಅಸೂಯೆಯಿಂದಲೇ ಮಾತನಾಡುತ್ತಿದ್ದಾರೆ.

ಯಾರು ಏನೆಂದುಕೊಂಡರೂ ನಾವು ಹೇಳುವ ಜ್ಞಾನವೆಲ್ಲವೂ ಶರೀರಾಂತರ್ಗತವಾಗಿರುವುದು. ಆತ್ಮಗಳ ಸಂಬಂಧವಾಗಿರುವುದು ಶರೀರದಲ್ಲಿನ ಆತ್ಮವೇ ಶರೀರವನ್ನು ನಡೆಸುತ್ತಿರುವಾಗ, ಪರಮಾತ್ಮ ಸಾಕ್ಷಿಯಾಗಿ ನೋಡುತ್ತಾ ಏನೂ ಮಾಡದೇ ಸುಮ್ಮನಿದೆಯೆಂದೂ, ಜೀವಾತ್ಮ ಶರೀರದಲ್ಲಿ ನಡೆಯುವ ಕೆಲಸಗಳಿಂದ ಕಷ್ಟಸುಖಗಳನ್ನು ಅನುಭವಿಸುತ್ತಿದೆಯೆಂದು ಮುಖ್ಯವಾಗಿ ಹೇಳುತ್ತಿದ್ದೇವೆ. **ಮೂರು ಗ್ರಂಥಗಳಲ್ಲಿ ಮುಖ್ಯವಾದ ಸಾರಾಂಶ ಮೂರು ಆತ್ಮಗಳ ವಿಷಯವೇ**. ಮೂರು ಆತ್ಮಗಳನ್ನು ನಾವು **"ತ್ರೈತ"** ಎಂದು ಹೇಳಿರುವಾಗ, ಕ್ರೈಸ್ತರು **"ತ್ರಿತ್ವ"** ಎಂದು ಹೇಳಿರುವಾಗ, ಮುಸ್ಲಿಮ್‌ರು **"ತೌರಾತ್"** ಎಂದು ಹೇಳಿದ್ದಾರೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ **ಕ್ಷರ, ಅಕ್ಷರ, ಪುರುಷೋತ್ತಮ** ಎನ್ನುವ ಮೂರು ಆತ್ಮಗಳನ್ನು ಕುರಿತು ಪುರುಷೋತ್ತಮ ಪ್ರಾಪ್ತಿ ಯೋಗ ಎಂಬ ಅಧ್ಯಾಯದಲ್ಲಿ ಹೇಳಿರುವಾಗ, ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಾಕ್ಯದಲ್ಲಿ **ಕುಮಾರನು, ತಂದೆ, ಪರಿಶುದ್ಧಾತ್ಮಯೆಂದು** ಮೂವರನ್ನು (ಮೂರು ಆತ್ಮಗಳನ್ನು) ಕುರಿತು ಹೇಳಿರುವಾಗ, ಅಂತಿಮ ದೈವಗ್ರಂಥಗಳಲ್ಲಿ 50ನೇ ಸೂರಾದಲ್ಲಿ 21ನೇ ಆಯತ್‌ನಲ್ಲಿ **ನಡೆಸಲ್ಪಡುವವನು, ನಡೆಸುವವನು, ಸಾಕ್ಷಿಯಾಗಿ ನೋಡುವವನು** ಮೂವರು ಇದ್ದಾರೆಂದು ಹೇಳಿದ್ದಾರೆ. ಭಾಷೆ ಬೇರೆಯಾದರೂ, ಗ್ರಂಥಗಳು ಬೇರೆಯಾದರೂ, ಹೇಳಿದ ಜ್ಞಾನ ಮೂರರಲ್ಲಿ ಒಂದೇ ಇದೆ ಎನ್ನುವುದಕ್ಕೆ ಇದಕ್ಕಿಂತ ಸಾಕ್ಷಿ ಬೇರೇ ಏನೂ ಬೇಕಾಗಿಲ್ಲ. ಮೂರು ದೈವಗ್ರಂಥಗಳಲ್ಲಿ ಮುಖ್ಯವಾದ ಜ್ಞಾನ ಮೂರು ಆತ್ಮಗಳನ್ನು ಕುರಿತು ಹೇಳಿರುವುದೇ ಆಗಿರುವುದರಿಂದ, ಒಂದು ದೈವಗ್ರಂಥವನ್ನು ಪೂರ್ತಿಯಾಗಿ ತಿಳಿದವನಿಗೆ ಉಳಿದ ಎರಡು ಗ್ರಂಥಗಳಲ್ಲಿನ ಮೂರು ಆತ್ಮಗಳ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ನಾನು ಭಗವದ್ಗೀತೆಯಲ್ಲಿನ ಮೂರು ಆತ್ಮಗಳ ಜ್ಞಾನವನ್ನು ತಿಳಿಯಲಾಗಿ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಎಂಬ ಹೆಸರಿಂದ ಗ್ರಂಥವನ್ನು ಬರೆದಿರುವುದರಿಂದ, ಉಳಿದ ಎರಡು ಗ್ರಂಥಗಳಲ್ಲಿನ ಮೂರು ಆತ್ಮಗಳ ಜ್ಞಾನ ಸುಲಭವಾಗಿ ತಿಳಿದಿದ್ದೇವೆ. ಅಂತಿಮ ದೈವಗ್ರಂಥದಲ್ಲಿನ ವಾಕ್ಯಗಳನ್ನು ಮುಸ್ಲೀಮ್‌ರು ಸರಿಯಾಗಿ ಅರ್ಥ ಮಾಡಿಕೊಳ್ಳದಿರುವುದರಿಂದ, ಅವರಿಗೆ ಮೂರು

ಅತ್ಮಗಳ ಸೂಕ್ಷ್ಮಜ್ಞಾನ ತಿಳಿಯದಂತಿರುವುದರಿಂದ ನಾವು ಕೆಲವು ಮುಖ್ಯವಾದ ಆಯತ್‌ಗಳನ್ನು ವಿವರಿಸಿ ಬರೆಯಬೇಕೆಂದು **"ಅಂತಿಮ ದೈವ ಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಗ್ರಮಥವನ್ನು ಬರೆದಿದ್ದೆವೆ. ಭಗವದ್ಗೀತೆ ನನಗೆ ಸುಲಭ ವಾಗಿ ಅರ್ಥವಾಗುವುದರಿಂದ, ಅದೇ ಜ್ಞಾನವೇ ಉಳಿದ ಎರಡು ಗ್ರಂಥ ಗಳಲ್ಲಿಯೂ ಇರುವುದರಿಂದ, ಅವೂ ಸಹ ಸುಲಭವಾಗಿಯೇ ಅರ್ಥವಾಗಿವೆ. ಎಲ್ಲದಕ್ಕಿಂತ ಮೊದಲು **ಸ್ವಮತ ಅಭಿಮಾನವು, ಪರಮತ ದ್ವೇಷವು ಇಲ್ಲದವನಿಗೆ ಮೂರು ಗ್ರಂಥಗಳಲ್ಲಿ ಹೇಳಿರುವುದು ಒಂದೇ ಜ್ಞಾನವೆಂದು ತಿಳಿಯಬಲ್ಲದು.** ನಾವು ಎಲ್ಲ ಮತಗಳಲ್ಲಿಯೂ ಒಂದೇ ಜ್ಞಾನವಿದೆಯೆಂದೂ, ಒಂದೇ ದೇವರನ್ನು ಕುರಿತು ಹೇಳಿರುವುದೆಂದೂ ತಿಳಿದು ಅದೇ ವಿಧವಾಗಿ ಬರೆದಿದ್ದೇವೆ.

ನಾವು ಹೊರಗಿನ ದೇವತೆಗಳನ್ನು ಕುರಿತು ಹೇಳಿದರೂ, ಇರುವ ಸತ್ಯವನ್ನು ಹೇಳಿದ್ದೇವೆ. ಮನುಷ್ಯರು ಆರಾಧಿಸುವ ಆರಾಧನೆಗಳು ದೆವತೆಗಳಿಗೆ ಅಲ್ಲದೆ ದೇವರಿಗೇ ಸೇರಿದರೆ ಚೆನ್ನಾಗಿರುತ್ತದೆಂದು ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವನ್ನೇ ನಾವೂ ವಿವರಿಸಿ ಹೇಳಿದ್ದೇವೆ. ಅಷ್ಟೇ ಹೊರತು ಪ್ರತ್ಯೇಕಿಸಿ ಈ ದೇವರು ದೊಡ್ಡದೆಂದೂ, ಆ ದೇವರು ಚಿಕ್ಕದೆಂದೂ ಎಲ್ಲಿಯೂ ಹೇಳಲಿಲ್ಲ. ಮೂರು ಗ್ರಂಥಗಳಲ್ಲಿನ ಜ್ಞಾನವನ್ನೇ ಸಂಪೂರ್ಣವಾಗಿ ಹೇಳುತ್ತಾ, ಈಗ ಮರಣದ ನಂತರ ಜೀವನವನ್ನು ಕುರಿತು ಹೇಳುತ್ತಿದ್ದೇವೆ. ಮರಣದ ನಂತರ ಜೀವನ ನನ್ನ ವ್ಯಕ್ತಿಗತ ಅಭಿಪ್ರಾಯವಲ್ಲ. ದೈವಗ್ರಂಥಗಳಲ್ಲಿ ಹೇಳಿದ ವಿಷಯಗಳನ್ನು ಆಧಾರ ಮಾಡಿಕೊಂಡು ಹೇಳುವುದೇಯೆಂದು ತಿಳಿಯಬೇಕು. ದೈವಗ್ರಂಥಗಳಲ್ಲಿ ಹೇಳಿದ ವಿಷಯಗಳನ್ನು ಆಧಾರ ಮಾಡಿಕೊಂಡು ಹೇಳುವುದೇಯೆಂದು ತಿಳಿಯಬೇಕು. ಮರಣಗಲು ನಾಲ್ಕು ವಿಧಗಳೆಂದು ಎಲ್ಲಿಯೂ ಯಾರೂ ಹೇಳದಿದ್ದರೂ ಮರಣವನ್ನು ಕುರಿತು ಮಾತ್ರ ನಾವು ಹೇಳಿದ್ದೇವೆ. ಮರಣ ಜ್ಞಾನವನ್ನನುಸರಿಸಿ ಮರಣ ಯಾವುದೋ, ಮರಣವಲ್ಲದ್ದು ಯಾವುದೋ ಸುಲಭವಾಗಿ ತಿಳಿಯಬಹುದು. ಆ ವಿಧಾನದ ಪ್ರಕಾರ ಮರಣವನ್ನು ಒಂದನ್ನೇ ಅಲ್ಲದೇ ಮನುಷ್ಯ ಅಕಾಲ ಮರಣವನ್ನು ಸಹ ಹೊಂದುತ್ತಿದ್ದಾನೆಂದು ತಿಳಿದಿದ್ದೇವೆ.

ಸತ್ತುಹೋದರೂ, ಶರೀರ ಇಲ್ಲದಂತೆ ಹೋದರೂ, ಹದಿನೈದು ಭಾಗಗಳ ಸೂಕ್ಷ್ಮಶರೀರದಿಂದ ಬದುಕುವವರು ಪ್ರತ್ಯಕ್ಷ ಸತ್ಯವಾಗಿ ಎಷ್ಟೋ ಇರುವುದನ್ನನು ಸರಿಸಿ ಇವರೆಲ್ಲರೂ ಮರಣವನ್ನು ಹೊಂದಲಿಲ್ಲವೆಂದೂ, ಅಕಾಲ ಮರಣವನ್ನು ಹೊಂದಿದ್ದಾರೆಂದು ಹೇಳಿದ್ದೇವೆ. ಅಕಾಲ ಮರಣ ಪ್ರತ್ಯಕ್ಷ ಅನುಭವಗಳಿಂದ ತಿಳಿಯುವುದರಿಂದ ಅದನ್ನು ಯಾರೂ ಅಲ್ಲ ಎನ್ನಲಾರರು. ಹಾಗೆಯೇ ಸ್ವಲ್ಪ ಸಮಯ ಸತ್ತುಹೋಗಿ ಪುನಃ ಸಜೀವವಾಗಿ ಎದ್ದಿರುವವರು ಎಷ್ಟೋ ಇದ್ದಾರೆ. ಅವರದು ಕೂಡಾ ಪ್ರತ್ಯಕ್ಷವಾಗಿ ನಡೆದ ಮತ್ತು ನಡೆಯುತ್ತಿರುವ ಸಂಘಟನೆಗಳೇ ಆದ್ದರಿಂದ ಅವುಗಳನ್ನು **"ತಾತ್ಕಾಲಿಕ ಮರಣ"**ಗಳೆಂದು ಹೆಸರಿಟ್ಟು ಹೇಳಿದ್ದೇವೆ. ಈ ಮೂರು ಮರಣಗಳು ಮನುಷ್ಯ ಜೀವನದಲ್ಲಿ ನಡೆಯುತ್ತಿವೆ. ನಾಲ್ಕನೆಯದು ಮಾತ್ರ ಕೊನೆಯ ಮರಣ. ಅದನ್ನು ಹೊಂದಿದವನು ಪುನಃ ಹುಟ್ಟುವುದಿಲ್ಲ. ಅವನು ದೇವರಲ್ಲೇ ಐಕ್ಯವಾಗಿ ಹೋಗುವನು. ಅದನ್ನೇ ಮೋಕ್ಷ ಎನ್ನುತ್ತೇವೆ. ಇದಕ್ಕೂ ಮೊದಲು ಕಾಲಮರಣವನ್ನು ಕುರಿತು ಸವಿವರವಾಗಿ ತಿಳಿದು ಕೊಂಡಿದ್ದೇವೆ. ಈಗ ಅಕಾಲ ಮರಣವನ್ನು ಕುರಿತು ತಿಳಿದುಕೊಳ್ಳೋಣ. ಕಾಲ ಮರಣವನ್ನು ಹೊಂದಿದವನು ನಂತರ ಕೂಡಲೇ ಪುನಃ ಭೂಮಿಮೇಲೆಯೇ ಹೊಸ ಜೀವನವನ್ನು, ಹೊಸ ಶರೀರದಿಂದ ಪ್ರಾರಂಭಿಸುತ್ತಿದ್ದಾನೆ. ಮರಣದ ನಂತರ ಅದೇ ಕ್ಷಣವೇ ಪುನಃ ಜನ್ಮ ಉಂಟಾಗುವುದರಿಂದ ಮರಣದ ನಂತರ ಈಗಿರುವ ಜೀವನವೇ ಇದೆಯೆಂದು ತಿಳಿದುಹೋಗಿದೆ. ಆದರೇ ಗತಜನ್ಮದಲ್ಲಿ ಮನುಷ್ಯ ಮಾಡಿಕೊಂಡ ಪಾಪಪುಣ್ಯಗಳನ್ನು ಸಹ ಅದೇ ಮನುಷ್ಯನೇ ಎರಡನೆಯ ಜನ್ಮದಲ್ಲಿ ಅನುಭವಿಸುತ್ತಿದ್ದಾನೆಂದು ತಿಳಿದುಹೋಗಿದೆ. ಅಷ್ಟೇ ಹೊರತು ಪ್ರತ್ಯೇಕಿಸಿ ಸ್ವರ್ಗವಾಗಲೀ, ನರಕವಾಗಲೀ ಮರಣದ ನಂತರ ಇಲ್ಲವೆಂದು ಅರ್ಥವಾಗಿದೆ. ಈಗ ಅಕಾಲ ಮರಣ ಹೇಗೆ ಸಂಭವಿಸುತ್ತದೋ, ಅಕಾಲ ಮರಣದ ನಂತರ ಮನುಷ್ಯ ಯಾವ ಸ್ಥಿತಿಯಲ್ಲಿ ಇರುತ್ತಾನೋ ಅವುಗಳ ವಿಷಯವೆಲ್ಲವೂ ವಿವರವಾಗಿ ತಿಳಿದುಕೊಳ್ಳೋಣ. ಇದು ಎಲ್ಲರಿಗೂ ತಿಳಿಯದ ವಿಷಯವಾದ್ದರಿಂದ ಜಾಗರೂಕತೆಯಿಂದ ಕೇಳಿ ಮತ್ತು ಜಾಗರೂಕತೆಯಿಂದ ಓದಿ.

ಯಾವುದಾದರೂ ಅನುಭವಿಸಿದರಾಗಲಿ ಚೆನ್ನಾಗಿ ಅರ್ಥವಾಗುವುದಿಲ್ಲ. ಒಂದುವೇಳೆ ಅನುಭವಿಸಿದರೇ ಪುನಃ ಹೇಳುವುದಕ್ಕೆ ಅನುಭವಿಸಿದವನಿಗೆ ಜ್ಞಾಪಕವಿರಬೇಕು. ಅನುಭವಿಸಿದ ನಂತರ ಅದನ್ನು ಕುರಿತು ಜ್ಞಾಪಕವಿಲ್ಲದೇ ಹೋದರೇ ಅದನ್ನು ಅನುಭವಿಸಿದರೂ ಪ್ರಯೋಜನವಿರುವುದಿಲ್ಲ. ಮರಣ ಹುಟ್ಟಿದ ಮನುಷ್ಯನಿಗೆ ತಪ್ಪದೇ ಬರುತ್ತದೆ. ಆದರೇ ಮರಣವನ್ನು ಹೊಂದಿದವನು ಅದೇ ಸೆಕಂಡಿನಲ್ಲೇ ಬೇರೆ ಶರೀರವನ್ನು ಸೇರುತ್ತಿದ್ದಾನೆ. ಯಾವಾಗಾದರೇ ಮನುಷ್ಯ ಮರಣವನ್ನು ಹೊಂದುತ್ತಿದ್ದಾನೋ, ಅದಕ್ಕಿಂತ ಒಂದು ಸೆಕೆಂಡು ಮೊದಲು ಶರೀರದಲ್ಲಿನ ಎಲ್ಲ ಭಾಗಗಳಿಂದ ಜೀವಿಯು ಸಂಬಂಧ ಕಳೆದು ಕೊಳ್ಳುತ್ತಾ ಬರುತ್ತಾನೆ. ಕೊನೆಗೆ ಮನಸ್ಸಿನೊಂದಿಗೂ ಸಹ ಸಂಬಂಧ ಕಳೆದುಕೊಂಡ ನಂತರ ಜೀವಿಯು ಶರೀರವನ್ನು ಬಿಡುವನು, ಅದನ್ನೇ 'ಮರಣ' ಎನ್ನುತ್ತಿದ್ದೇವೆ. ಮರಣಕ್ಕಿಂತ ಒಂದು ಕ್ಷಣ ಮೊದಲೇ ಮನಸ್ಸು ಇಲ್ಲದಂತೆ ನಶಿಸಿಹೋಗುತ್ತಿದೆ. ಆದ್ದರಿಂದ ಆ ಶರೀರದಲ್ಲಿನ ಜ್ಞಾಪಕಗಳೆಲ್ಲವೂ ಜೀವಿಯು ಕಳೆದುಕೊಳ್ಳುವನು. ಮರಣದಲ್ಲಿ ಮನಸ್ಸೇ ಇಲ್ಲ, ಆದ್ದರಿಂದ ಆ ಸಮಯದಲ್ಲಿ ನಡೆಯುವ ಅನುಭವವನ್ನು ಜ್ಞಾಪಕ ಇಟ್ಟುಕೊಳ್ಳುವವರು ಯಾರೂ ಇರುವುದಿಲ್ಲ. ಏಕೆಂದರೇ! ಶರೀರದಲ್ಲಿ ಜ್ಞಾಪಕ ಎನ್ನುವುದು ಮನಸ್ಸಿನಿಂದಲೇ ನಡೆಯುತ್ತಿರುತ್ತದೆ. ನಾಲಿಗೆ ಯಾವ ರೀತಿ ರುಚಿಯನ್ನು ನೋಡುವುದು ಎಂಬ ಕಾರ್ಯವನ್ನು ಮಾಡುತ್ತಾ ಎರಡನೆಯ ಕೆಲಸವಾಗಿ ಮಾತನಾಡುವುದು ಮಾಡುತ್ತಿದೆಯೋ, ಅದೇ ವಿಧವಾಗಿ ಮನಸ್ಸು ಶರೀರದಲ್ಲಿ ಹೊರಗಿನ ಅವಯವಗಳಿಗು ಒಳಗಿನ ಅವಯವಗಳಿಗೂ ಮಧ್ಯವರ್ತಿಯಾಗಿ ಕೆಲಸ ಮಾಡುವುದೇ ಅಲ್ಲದೆ, ಶರೀರದಲ್ಲಿ ನಡೆದ ವಿಷಯಗಳೆಲ್ಲವನ್ನು ಜ್ಞಾಪಕವಿಟ್ಟುಕೊಂಡು ಅಗತ್ಯ ಬಂದಾಗ ಜ್ಞಾಪಕ ಮಾಡುತ್ತಿದೆ. ಮನನ ಎಂದರೇ **'ಜ್ಞಾಪಕ'** ಎಂದು ಅರ್ಥ. ಮನನ ಮಾಡುವುದು ಆದ್ದರಿಂದ ಅದನ್ನು ಮನಸ್ಸು ಎಂದು ಹೆಸರು ಇಡುವುದು ನಡೆದಿದೆ. ಮನಸ್ಸು ಮರಣದಲ್ಲಿ ನಿಂತುಹೋಗಿದೆ, ಆದ್ದರಿಂದ ಆ ಸಮಯದಲ್ಲಿ ಮನುಷ್ಯನಿಗೆ ಜ್ಞಾಪಕವೆನ್ನುವುದೇ ಇಲ್ಲ. ಆದ್ದರಿಂದ ಮರಣವನ್ನು ಕುರಿತು ಯಾರೂ ಹೇಳುವುದಕ್ಕೆ ಸಾಧ್ಯ ವಾಗುವುದಿಲ್ಲ. ಆದರೂ **"ಜನನ ಮರಣ ಸಿದ್ಧಾಂತ"** ಎಂಬ ಗ್ರಂಥದಲ್ಲಿ

ಮರಣವನ್ನು ಕುರಿತು, ಮರಣ ಸಮಯದಲ್ಲಿ ಏನು ನಡೆಯುತ್ತಿದೆಯೋ ಅದನ್ನು ಕುರಿತು ವಿವರವಾಗಿ ಹೇಳಲಾಗಿದೆ. ಮರಣವೇ ದೊಡ್ಡ ರಹಸ್ಯ, ಅಷ್ಟು ದೊಡ್ಡ ರಹಸ್ಯವನ್ನು ಕುರಿತು ಹೇಳಿದಾಗ ಅಕಾಲ ಮರಣವನ್ನು ಕುರಿತು ಸುಲಭವಾಗಿ ಹೇಳಬಹುದು.

ಕಾಲವನ್ನು ಅನುಸರಿಸಿ ಕಾಲದಲ್ಲಿ ನಿರ್ಣಯಿಸಲಾಗಿರುವ ಕಾಲಾವಧಿಯ ಪ್ರಕಾರ ಬರುವುದು ಮರಣ. ಆದ್ದರಿಂದ ಅದನ್ನು ಕಾಲ ಮರಣ ಎನ್ನುತ್ತಿದ್ದೇವೆ. ಕಾಲದಲ್ಲಿ ನಿರ್ಣಯಿಸಲಾಗಿರುವ ಕಾಲಾವಧಿ ಬರುವುದಕ್ಕಿಂತ ಮೊದಲೇ ಬರುವ ಮರಣವನ್ನು ಅಕಾಲ ಮರಣ ಎನ್ನುತ್ತಿದ್ದೇವೆ. ಅಕಾಲ ಮರಣದಲ್ಲಿ ಹೊರಗಿನ ಇಂದ್ರಿಯಗಳಾದ ಹತ್ತು ಭಾಗಗಳು ಜೀವಿಯು ಬಿಟ್ಟು ಒಳಗಿನ ಭಾಗಗಳಾದ ಹದಿನೈದು ಭಾಗಗಳಲ್ಲಿಯೇ ನಿವಾಸವಿರುತ್ತದೆ. ಶರೀರ ಎರಡು ಭಾಗಗಳಾಗಿ ಇದೆ. ಒಂದು ಹೊರಗಿನ ಭಾಗ, ಎರಡು ಒಳಗಿನ ಭಾಗ. ಹೊರಗಿನ ಭಾಗದಲ್ಲಿ ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಒಟ್ಟು ಹತ್ತು ಭಾಗಗಳು ಇವೆ. ಮೇಲ್ನೋಟಕ್ಕೆ ಕಾಣಿಸುವ ಶರೀರಕ್ಕೇ ಹತ್ತು ಭಾಗಗಳಿವೆ ಆದ್ದರಿಂದ ಸ್ಥೂಲಶರೀರ ಎಂದರ್ಥ. ಒಳಗೆ ಹದಿನೈದು ಭಾಗಗಳಿಂದಿದ್ದರೂ ಅದನ್ನು ಸೂಕ್ಷ್ಮಶರೀರ ಎನ್ನುತ್ತೇವೆ. ಅದು ಕಾಣಿಸುವುದಿಲ್ಲ, ಆದ್ದರಿಂದ ಅದಕ್ಕೆ ಆ ಹೆಸರು ಬಂದಿದೆ. ಅಕಾಲ ಮರಣದಲ್ಲಿ ಜೀವಿಯು ಸ್ಥೂಲಶರೀರವನ್ನು ಬಿಟ್ಟು ಸೂಕ್ಷ್ಮಶರೀರದಲ್ಲಿ ಮಾತ್ರ ಇರುತ್ತದೆ. ಸೂಕ್ಷ್ಮ ಶರೀರದಲ್ಲಿ ಮನಸ್ಸು ಇರುವುದರಿಂದ ಸತ್ತುಹೋಗುವುದಕ್ಕಿಂತ ಮೊದಲು ಇರುವ ಜ್ಞಾಪಕಗಳೆಲ್ಲವೂ ಆತನು ಸತ್ತುಹೋದ ನಂತರವೂ ಸಹ ಇವೆ. ಮನುಷ್ಯ ತನ್ನ ಸ್ಥೂಲಶರೀರವನ್ನು ಕಳೆದುಕೊಂಡು ಸೂಕ್ಷ್ಮವಾಗಿ ಇರುವನು. ಆದ್ದರಿಂದ ಅಕಾಲ ಮರಣವನ್ನು ಹೊಂದಿದವನು ಎರಡನೆ ಜನ್ಮಕ್ಕೆ ಹೋಗುವ ಅವಕಾಶವೇ ಇಲ್ಲ. ಅಕಾಲ ಮರಣವನ್ನು ಹೊಂದಿದವನು ಬಾಹ್ಯ ಶರೀರವನ್ನು ಬಿಟ್ಟು ಅಂತರ ಶರೀರದೊಂದಿಗೆ ಇರುವುದರಿಂದ ಅವನು ಪೂರ್ತಿ ಮರಣಿಸಿದವನೊಂದಿಗೆ ಸಮಾನವಲ್ಲ. ಎರಡು ಶರೀರಗಳನ್ನು ಕಳೆದುಕೊಂಡಾಗಲೇ ಕಾಲ ಮರಣವಾಗುತ್ತದೆ. ಕಾಲ

ಮರಣವಲ್ಲದಿರುವಾಗ ಅಕಾಲ ಮರಣದಲ್ಲಿ ಅವನು ಕಾಣಿಸುವ ಶರೀರದಿಂದ ಇಲ್ಲದಂತೆ ಹೋಗುವನಾಗಲೀ, ಕಾಣಿಸದ ಶರೀರದೊಂದಿಗೆ ಇದ್ದಾನೆಂದು ತಿಳಿಯುತ್ತಿದೆ. ಹೊರಗಿನ ಶರೀರ ಮರಣಿಸುವುದರಿಂದ ಅವನನ್ನು ಎಲ್ಲರೂ ಸತ್ತುಹೋಗಿದ್ದಾನೆಂದು ಅಂದುಕೊಳ್ಳುತ್ತಾರೆ. ಆದರೂ ಅವನು ಪೂರ್ತಿ ಸತ್ತುಹೋಗದೇ, ಅರ್ಧ ಹತ್ತು ಶರೀರ ಭಾಗಗಳು ಸತ್ತುಹೋದವನಾಗಿ ಉಳಿದ ಹದಿನೈದು ಭಾಗಗಳೊಂದಿಗೆ ಜೀವಿಸಿದ್ದಾನೆ. ಅದು ಮೇಲ್ನೋಟಕ್ಕೆ ಮರಣ ವಾದರೂ ಅವನು ಸೂಕ್ಷ್ಮವಾಗಿ ಸಜೀವವಾಗಿಯೇ ಇರುತ್ತಾನೆ. ಅರ್ಧ ಶರೀರದೊಂದಿಗೆ ಸಜೀವವಾಗಿ ಇರುವವನಿಗೆ ಬದುಕಿರುವಾಗ ಜೀವನದ ಹಾಗೆಯೇ ಉಳಿದ ಜೀವನವೆಲ್ಲವೂ ಕಳೆಯುತ್ತದೆ. ಹಾಗೆ ಅಕಾಲ ಮರಣವನ್ನು ಹೊಂದಿದವನಿಗೆ ಗುಣಗಳಲ್ಲಿಯೂ, ವ್ಯಕ್ತಿತ್ವದಲ್ಲಿಯೂ ಯಾವುದೇ ಬದಲಾವಣೆ ಇರುವುದಿಲ್ಲ. ಸ್ಥೂಲಶರೀರವಿದ್ದರೆ ಎಲ್ಲರಿಗೂ ಕಾಣಿಸುವನು, ಸ್ಥೂಲಶರೀರ ಇಲ್ಲದಿರುವುದರಿಂದ ಯಾರಿಗೂ ಕಾಣಿಸುವುದಿಲ್ಲ. ಅಕಾಲ ಮರಣವನ್ನು ಹೊಂದಿದವನು ಮನುಷ್ಯರ ಮಧ್ಯದಲ್ಲೇ ಜೀವಿಸುತ್ತಿರುವನು. ಆತನಿಗೆ ಸ್ಥೂಲದಿಂದ ಬದುಕಿರುವವರೆಲ್ಲರೂ ಕಾಣಿಸುತ್ತಿರುವರು. ಆದರೇ ಆತನಿಗೆ ಸ್ಥೂಲ ಇಲ್ಲವಾದ್ದರಿಂದ ಆತನು ನಮ್ಮ ಮಧ್ಯದಲ್ಲೇ ಇದ್ದರೂ ನಾವು ಆತನನ್ನು ಗುರುತಿಸಲಾರೆವು. ಆತನ ಮಾತುಗಳು ಶಬ್ದದಿಂದ ಕೂಡಿಕೊಂಡಿರುವುದಿಲ್ಲ. ಆದ್ದರಿಂದ ಅಕಾಲ ಮರಣ ಹೊಂದಿದವನು ಏನು ಮಾತನಾಡಿದರೂ ನಮಗೆ ಕೇಳಿಸುವುದಿಲ್ಲ. ಆತನು ಕೇಳಿಸುವುದಿಲ್ಲ ಮತ್ತು ಕಾಣಿಸುವುದಿಲ್ಲ. ನಾವು ಮಾತ್ರ ಆತನಿಗೆ ಕಾಣಿಸುತ್ತೇವೆ. ನಮ್ಮ ಮಾತುಗಳನ್ನು ಸಹ ಅವನು ಕೇಳಬಲ್ಲನು. ಇದನ್ನೇ 'ಸೂಕ್ಷ್ಮ ಜೀವನ' ಎಂದು ಹೇಳುತ್ತೇವೆ.

ಪ್ರತಿ ಮನುಷ್ಯ ಎರಡು ಶರೀರಗಳ ಸೇರುವಿಕೆಯಿಂದ ಬದುಕುತ್ತಿದ್ದಾನೆ. ಹತ್ತು ಭಾಗಗಳಿರುವ ಸ್ಥೂಲಶರೀರ ಒಂದಾದಾಗ, ಹದಿನೈದು ಭಾಗಗಳ ಸೂಕ್ಷ್ಮ ಶರೀರ ಎರಡನೆಯದು. ಕಾಣಿಸದ ಸೂಕ್ಷ್ಮ ಶರೀರ ಸ್ಥೂಲ ಶರೀರದಲ್ಲಿ ಮಿಳಿತವಾಗಿದೆ. ಸ್ಥೂಲ ಮತ್ತು ಸೂಕ್ಷ್ಮ ಎರಡು ಶರೀರಗಳೊಂದಿಗೆ ಮನುಷ್ಯ

ನಿವಾಸಿಸುತ್ತಿದ್ದರೂ ಪ್ರತಿ ಮನುಷ್ಯನಿಗೂ ತನ್ನ ಸ್ಥೂಲ ಶರೀರ ಮಾತ್ರ ಕಾಣಿಸುತ್ತದೆ ಆದರೇ, ಸೂಕ್ಷ್ಮ ಶರೀರ ಕಾಣಿಸುವುದಿಲ್ಲ. ಆದ್ದರಿಂದ ತನ್ನ ಸೂಕ್ಷ್ಮ ಶರೀರವನ್ನು ತಾನೇ ನಂಬಲಾರದ ಸ್ಥಿತಿಯಲ್ಲಿ ಮನುಷ್ಯ ಇದ್ದಾನೆ. ಮನುಷ್ಯನಿಗೆ ತಿಳಿದರೂ ತಿಳಿಯದಿದ್ದರೂ ಸ್ಥೂಲ, ಸೂಕ್ಷ್ಮ ಎರಡು ಶರೀರಗಳಲ್ಲಿ ಭೂಮಿಮೇಲೆ ನಿವಾಸಿಸುತ್ತಿದ್ದಾನೆ. ಅಕಾಲ ಮರಣದಲ್ಲಿ ಸ್ಥೂಲ ಶರೀರ ಹೋಗಿ ಸೂಕ್ಷ್ಮ ಶರೀರ ಮಾತ್ರ ಉಳಿಯುತ್ತದೆ. ಸೂಕ್ಷ್ಮಶರೀರ ಇತರರ ದೃಷ್ಠಿಗೆ ಕಾಣಿಸುವುದಿಲ್ಲ, ಆದ್ದರಿಂದ ಬದುಕಿರುವ ಮನುಷ್ಯರು ಸೂಕ್ಷ್ಮವನ್ನು ನಂಬಲಾರದಂತಿದ್ದಾರೆ. ಆದರೇ ಅಕಾಲ ಮರಣ ಹೊಂದಿದವರೆಲ್ಲರಿಗೂ ಸೂಕ್ಷ್ಮ ಶರೀರಗಳು ಕಾಣಿಸುತ್ತವೆ. ಏಕೆಂದರೇ! ತಾವೂ ಸಹ ಅಕಾಲ ಮರಣದಿಂದ ಸೂಕ್ಷ್ಮವಾಗಿ ಬದಲಾಗಿರುವು ದರಿಂದ, ಸೂಕ್ಷ್ಮ ಶರೀರಕ್ಕೆ ಇರುವ ದೃಷ್ಠಿಯಿಂದ ಇತರ ಸೂಕ್ಷ್ಮಗಳನ್ನು ನೋಡುವ ಅವಕಾಶವಿದೆ. ಹಾಗೆ ಇತರ ಸೂಕ್ಷ್ಮಶರೀರಗಳನ್ನು ನೋಡಿದಾಗ ಸುಮಾರು ಬದುಕಿರುವ ಜನಸಂಖ್ಯೆಯೊಂದಿಗೆ ಸೂಕ್ಷ್ಮವಾಗಿ ಬದುಕುತ್ತಿರುವವರು ಸಹ ಇದ್ದಾರೆಂದು ತಿಳಿಯಬಲ್ಲದು. ಆ ವಿಷಯ ತಿಳಿದ ಎಲ್ಲರೂ ಆಶ್ಚರ್ಯಪಡುವಂತೆ ಸೂಕ್ಷ್ಮ ಪ್ರಪಂಚವಿದೆಯೆಂದು ತಿಳಿಯುತ್ತಿದೆ. ಸೂಕ್ಷ್ಮವಾಗಿ ಸ್ವಲ್ಪ ಕಾಲ ಬದುಕಿದ ನಂತರ ಅವರೆಲ್ಲರೂ ಕಾಲಮರಣವನ್ನು ಹೊಂದಿ ಸೂಕ್ಷ್ಮ ಶರೀರವನ್ನು ಸಹ ಬಿಟ್ಟು ಎರಡನೆಯ ಜನ್ಮಕ್ಕೆ ಹೋಗುವುದು ನಡೆಯುತ್ತಿದೆ.

ಒಬ್ಬ ಮನುಷ್ಯನ ಜೀವನದಕಾಲ 80 ವರ್ಷಗಳು ಇದೆಯೆಂದು ಕೊಳ್ಳೋಣ. ಅಂತವನು ತನ್ನ ಕರ್ಮದ ಪ್ರಕಾರ 35 ವರ್ಷಗಳಿಗೆ ಅಕಾಲ ಮರಣವನ್ನು ಹೊಂದಿದ್ದಾನೆಂದುಕೊಳ್ಳೀ. ಅಕಾಲ ಮರಣದ ನಂತರ ಸಹ ಮನುಷ್ಯ ಸೂಕ್ಷ್ಮಶರೀರದೊಂದಿಗೆ ತನ್ನ ಜೀವನದಲ್ಲಿ ಉಳಿದ 45 ವರ್ಷಗಳು ಬದುಕಬೇಕಾಗಿದೆ. ಅಂದಿಗೆ 80 ವರ್ಷಗಳು ಪೂರ್ತಿ ಆಗುವುದರಿಂದ ಆಗ ಕಾಲ ಮರಣಹೊಂದಿ ನಂತರ ಜನ್ಮಕ್ಕೆ ಹೋಗುವುದು ನಡೆಯುತ್ತಿದೆ. ಆತನು 35 ವರ್ಷಗಳು ಕಾಣಿಸುವ ಮನುಷ್ಯನಾಗಿ ಬದುಕಿದವನು, 45 ವರ್ಷಗಳು ಕಾಣಿಸದ ಮನುಷ್ಯನಾಗಿ ಬದುಕಬೇಕಾಗಿ ಬರುತ್ತಿದೆ. ಅಂತಹ ಸೂಕ್ಷ್ಮ

ಜೀವನವನ್ನು ನಂಬದವರು ಬಹಳ ಜನರಿದ್ದಾರೆ. ಆದರೇ ಅಂತವರಲ್ಲಿ ಕೆಲವರಿಗೆ ಅಕಾಲ ಮರಣ ಬರೆದಿಟ್ಟಿರಲಾಗಿರುತ್ತದೆ. ಅಕಾಲ ಮರಣವನ್ನು ಹೊಂದಿದ ನಂತರ ಅವರು ನಾವು ಈಗ ಹೇಳಿದ ಮಾತನ್ನು ಸತ್ಯವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಆಗ ಸೂಕ್ಷ್ಮಪ್ರಪಂಚ ಪ್ರತ್ಯಕ್ಷವಾಗಿ ತಿಳಿಯುತ್ತಿರುವುದರಿಂದ 'ನಾನು ನಂಬುವುದಿಲ್ಲ' ಎನ್ನುವುದಕ್ಕೆ ಅವಕಾಶವಿಲ್ಲ. ಎಂತಹ ಹೇತುವಾದಿಗಳಾದರೂ ಹೇತು ಪ್ರತ್ಯಕ್ಷವಾಗಿ ಕಾಣಿಸಿದಾಗ ಸೂಕ್ಷ್ಮ ಲೋಕವನ್ನು ಕುರಿತು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಸೂಕ್ಷ್ಮವಾಗಿ ಇರುವವರಿಗೆ ಬದುಕಿರುವಾಗ ಇರುವಂತೆ ಕಷ್ಟಸುಖಗಳ ಅನುಭವಗಳು, ಅನೇಕ ವಿಷಯ ಸಂಘಟನೆಗಳು ಇರುವುದರಿಂದ ಸ್ಥೂಲ ಶರೀರದಲ್ಲಿ ಇರುವಂತೇ ಎಲ್ಲಾ ಇವೆಯೆಂದು ತಿಳಿಯುತ್ತದೆ. ಒಂದು ಕಾಣಿಸದ ಪ್ರತ್ಯೇಕತೆ ಹೊರತು ಸ್ಥೂಲ ಜೀವನಕ್ಕೂ, ಸೂಕ್ಷ್ಮ ಜೀವನಕ್ಕೂ ಏನೂ ವ್ಯತ್ಯಾಸವಿಲ್ಲ. ಈ ರೀತಿ ಮನುಷ್ಯ ಅಕಾಲ ಮರಣ ಹೊಂದಿದ ನಂತರ ಸಹ ಜೀವನ ನಡೆಯುತ್ತಿದೆಯೆಂದೂ, ಜನ್ಮ ಬದಲಾಗದಂತೆ ಅದೇ ಜನ್ಮದಲ್ಲಿನ ಜೀವನವೇ ನಡೆಯುತ್ತಿದೆಯೆಂದು ತಿಳಿಯುತ್ತಿದೆ. ಇದನ್ನನುಸರಿಸಿ ಮರಣದ ನಂತರ ಹೊಸ ಜನ್ಮದಲ್ಲಿ ಜೀವಿಸುವುದು ಇದೆಯೆಂದು, ಅಕಾಲ ಮರಣದ ನಂತರ ಹಳೆ ಜನ್ಮದಲ್ಲೇ ಜೀವನ ಇದೆಯೆಂದು ತಿಳಿಯುತ್ತಿದೆ. ಮನುಷ್ಯನಿಗಿರುವ ನಾಲ್ಕು ಮರಣಗಳಲ್ಲಿ ಎರಡು ಮರಣಗಳ ವಿವರ ತಿಳಿದುಹೋಗಿದೆ.

**ಪ್ರಶ್ನೆ :– ಅಕಾಲ ಮರಣ ಹೊಂದಿದವನಿಗೆ ಸ್ಥೂಲ ಶರೀರ ಇರುವುದಿಲ್ಲ ಅಲ್ಲವೆ! ಅವರಿಗೆ ಶ್ವಾಸಕೋಶಗಳು ಇರುವುದಿಲ್ಲ ಅಲ್ಲವೆ! ಹಾಗಿರುವಾಗ ಅವರು ಹೇಗೆ ಶ್ವಾಸ ತೆಗೆದುಕೊಳ್ಳುತ್ತಾರೆ? ಅವರಿಗೆ ರಕ್ತಪ್ರಸರಣ ನಡೆಯುವುದಕ್ಕೆ ಶರೀರವೇ ಇಲ್ಲ ಅಲ್ಲವೇ! ಆಗ ಅವರ ಜೀವನ ಹೇಗೆ ಮುಂದುವರೆಯುತ್ತದೆ?**

**ಉತ್ತರ :–** ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಮಾತ್ರವೇ ಸ್ಥೂಲ ಶರೀರವಾಗಿ ಲೆಕ್ಕಿಸಲಾಗುತ್ತಿದೆ. ಶ್ವಾಸಕೋಶಕ್ಕೆ ಸಂಬಂಧಿಸಿದ ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ ವಾಯುಗಳು ಐದು ಸ್ಥೂಲ ಶರೀರಕ್ಕೆ

ಸಂಬಂಧಿಸಿರುವವಲ್ಲ. ಈ ಐದು ವಾಯುಗಳು ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿರುವವು. ಹಾಗೆಯೇ ರಕ್ತಪ್ರಸರಣ ಸ್ಥೂಲವಾಗಿ ನಡೆಯದಿದ್ದರೂ ಸೂಕ್ಷ್ಮವಾಗಿ ವಾಯುಗಳು ಶರೀರದಲ್ಲಿ ಸೇರಿ ಸೂಕ್ಷ್ಮ ಶರೀರವೆಲ್ಲಾ ತುಂಬಿರುತ್ತವೆ. ರಕ್ತವಿಲ್ಲದಿದ್ದರೂ ಪ್ರಾಣವಾಯು ಸೂಕ್ಷ್ಮಶರೀರದಲ್ಲಿ ಸೇರಿರುತ್ತದೆ. ಆದ್ದರಿಂದ ಸ್ಥೂಲದಲ್ಲಿ ಬದುಕಿದ ಹಾಗೇ ಮನುಷ್ಯ ಸೂಕ್ಷ್ಮದಲ್ಲಿ ಸಹ ಬದುಕುತ್ತಿದ್ದಾನೆ. ಆ ವಿಷಯ ಸ್ಥೂಲ ಶರೀರದಲ್ಲಿ ಇರುವವರಿಗೆ ತಿಳಿಯದೇ ಹೋದರೂ ಅಲ್ಲಿ ಮಾತ್ರ ಸೂಕ್ಷ್ಮ ಜೀವನ ಇಚ್ಛೆಯ ಪ್ರಕಾರ ನಡೆಯುತ್ತಿದೆ. ಸೂಕ್ಷ್ಮ ಶರೀರವನ್ನು ನಮ್ಮ ಭಾಷೆಯಲ್ಲಿ 'ದೆವ್ವ' ಎನ್ನುತ್ತಿದ್ದೇವೆ. ದೆವ್ವ ಎಂದರೇ ಯಾವುದೋ ಅನಾಗರಿಕ ಭಾಷೆ ಎಂದು ಅಂದುಕೊಳ್ಳಬೇಡ. ನಾಳೆ ನಾವೂ ಸಹ ದೆವ್ವಗಳಾಗುವುದು ಇದೆಯೇನೋ ಹೇಳಲಾರೆವು ಅಲ್ಲವೆ!

ಮನುಷ್ಯನಿಗೆ ಸಂಭವಿಸುವ ಕಾಲ ಮರಣದ ನಂತರ ಹೊಸ ಜನ್ಮ ಹೊಸ ಜೀವನವಿದೆಯೆಂದೂ, ಹಾಗೆಯೇ ಮನುಷ್ಯನಿಗೆ ಸಂಭವಿಸುವ ಅಕಾಲ ಮರಣದ ನಂತರ ಹಳೆಯ ಜನ್ಮದಲ್ಲೇ, ಹಳೆಯ ಜೀವನವೇ ಇರುತ್ತದೆಂದು ತಿಳಿದುಹೋಗಿದೆ. ಇನ್ನು ತಾತ್ಕಾಲಿಕ ಮರಣದ ನಂತರ ಹೇಗಿರುತ್ತದೋ ತಿಳಿದುಕೊಳ್ಳೋಣ. ಜೀವನದ ಕಾಲದಲ್ಲಿ ಕರ್ಮ ಮುಗಿದುಹೋದರೇ ಬರುವುದು ಕಾಲ ಮರಣ. ಹಾಗೆಯೇ ಜೀವನದ ಕಾಲದಲ್ಲಿ ಕರ್ಮ ಇನ್ನೂ ಉಳಿದಿರುವಾಗಲೇ ಬರುವುದು ಅಕಾಲ ಮರಣ. ಜೀವನದ ಕಾಲದಲ್ಲಿ ಸ್ಥೂಲ ಕರ್ಮ ಮುಗಿದುಹೋಗಿ ಸೂಕ್ಷ್ಮಕರ್ಮ ಉಳಿದವರಿಗೆ ಅಕಾಲ ಮರಣ ಬಂದು, ಸೂಕ್ಷ್ಮ ಕರ್ಮವನ್ನು ಸೂಕ್ಷ್ಮದೇಹದೊಂದಿಗೆಯೇ ಅನುಭವಿಸುವರು. ಇನ್ನು ಜೀವನದಲ್ಲಿ ಸ್ಥೂಲ ಕರ್ಮ ಮುಗಿಯುವುದಕ್ಕಿಂತ ಮೊದಲೇ ಸ್ಥೂಲವಾಗಿ ಮರಣಿಸಿದರೂ, ಸೂಕ್ಷ್ಮವಾಗಿ ಜೀವಿಯು ಆ ದೇಹವನ್ನು ಬಿಡದಂತೆ ಇರುವುದನ್ನು **'ತಾತ್ಕಾಲಿಕ ಮರಣ'** ಎನ್ನುತ್ತೇವೆ. ವಾಸ್ತವವಾಗಿ ತಾತ್ಕಾಲಿಕ ಮರಣದಲ್ಲಿ ಮರಣವೆನ್ನುವುದೇ ಇಲ್ಲ, ಆದರೂ ಅದನ್ನು ಮರಣವೆಂದು ಹೇಳಬೇಕಾಗಿದೆ. ಜೀವಿಯು ಶರಿರವನ್ನು ಬಿಟ್ಟುಹೋದರೇ ಅದನ್ನು ಮರಣ ಎನ್ನಬಹುದು.

ಆದರೇ ಮರಣ ಎಂಬ ಅರ್ಥದ ಪ್ರಕಾರ ಶರೀರದಲ್ಲಿ ಕದಲಿಕೆಗಳು ನೊಂತುಹೋದರೂ ಸಹ ಮರಣ ಎಂದು ಅನ್ನಬಹುದು. ಇಲ್ಲಿ ಜೀವಿಯು ಶರೀರವನ್ನು ಬಿಟ್ಟುಹೋಗದಿದ್ದರೂ ಶರೀರದಲ್ಲಿನ ಕದಲಿಕೆಗಳೆಲ್ಲವೂ ನಿಂತುಹೋಗುತ್ತಿರುವುದರಿಂದ ಅದನ್ನು **'ತಾತ್ಕಾಲಿಕ ಮರಣ'** ಎಂದು ಹೇಳಬೇಕಾಗಿ ಬಂದಿದೆ.

ತಾತ್ಕಾಲಿಕ ಮರಣದಲ್ಲಿ ಶ್ವಾಸ ನಿಂತುಹೋಗುತ್ತದೆ, ಕದಲಿಕೆಗಳು ನಿಂತುಹೋಗುತ್ತವೆ. ಆತ್ಮ ತನ್ನ ಕೆಲಸವನ್ನು ಎಷ್ಟೋ ಸ್ವಲ್ಪ ಸಮಯ ನಿಲ್ಲಿಸುವುದು. ಶರೀರದಲ್ಲಿ ಎಲ್ಲ ಸಮಯಗಳಲ್ಲಿ ಕೆಲಸ ಮಾಡುವುದು ಆತ್ಮೇ ಆಗಿರುವುದರಿಂದ ಆತ್ಮ ಯಾವಾಗ ನಿಂತುಹೋಗುತ್ತದೋ ಆಗ ಶರೀರದಲ್ಲಿನ ಕೆಲಸಗಳೆಲ್ಲವೂ ಸ್ಥಂಭಿಸುತ್ತವೆ. ಹಾಗೆ ಶರೀರದಲ್ಲಿನ ಕದಲಿಕೆಗಳೆಲ್ಲವೂ ನಿಂತುಹೋಗುವುದರಿಂದ, ಶ್ವಾಸವೂ ಸಹ ಆಡದಂತಿರುವುದರಿಂದ, ಅದನ್ನು ಒಂದು ವಿಧವಾಗಿ ಮರಣವೆಂದೇ ಹೇಳಬಹುದು. ಆದರೇ ಮರಣವಂತಹ ಈ ಮರಣದಲ್ಲಿ ಆತ್ಮವಾಗಲೀ, ಜೀವಾತ್ಮವಾಗಲೀ ಶರೀರವನ್ನು ಬಿಟ್ಟು ಹೊರಗೆ ಹೋಗುವುದಿಲ್ಲ. ಆದ್ದರಿಂದ ಮರಣವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಕೆಲವು ಸಮಯವಾಗಲೀ, ಬಹಳ ಸಮಯವಾಗಲೀ ಹಾಗೆಯೇ ಶರೀರದಲ್ಲಿ ಆತ್ಮ ಕದಲದಂತಿದ್ದು ನಂತರ ಕದಲಿ ಕೆಲಸ ಮಾಡುವುದರಿಂದ, ಶ್ವಾಸ ಆಡುವುದರಿಂದ ಸತ್ತುಹೋಗಿದ್ದಾನೆಂದು ಕೊಂಡವನು ಬದುಕುತ್ತಿದ್ದಾನೆ. ಕೆಲವು ಗಂಟೆಗಳಾಗಲೀ, ಕೆಲವು ದಿನಗಳಾಗಲೀ ಮರಣಸ್ಥಿತಿಯಲ್ಲಿರುವವನು ಪುನಃ ಅದೇ ಶರೀರದಲ್ಲಿ ಎಚ್ಚರದೊಳಗೆ ಬರುವುದನ್ನು ತಾತ್ಕಾಲಿಕ ಮರಣ ಎನ್ನುತ್ತಿದ್ದೇವೆ. ಮರಣಿಸಿದಂತೆ ಕಾಣಿಸುವ ಶರೀರದಲ್ಲಿ ಮೊದಲಿರುವ ಜೀವಿಯೇ ಪುನಃ ಯಥಾಸ್ಥಿಯೊಳಗೆ ಬರುವುದು ಆಶ್ಚರ್ಯವೇ ಆದರೂ ಅದು ಸತ್ಯಬದ್ಧವಾಗಿ ಕೆಲವು ಕಡೆ ನಡೆಯುತ್ತಿದೆ. ಒಂದೇ ಮನುಷ್ಯ ಒಂದೇ ಶರೀರದಲ್ಲಿ ಎರಡು ಬಾರಿ ಸತ್ತುಹೋಗುವುದು ಎರಡು ಬಾರಿ ಬದುಕಿದಂತೆ ಕಾಣಿಸುತ್ತಿದೆ. ಎರಡನೆಯ ಬಾರಿ ನಡೆಯುವುದು ಕಾಲಮರಣವೋ, ಅಕಾಲ ಮರಣವೋ, ಆದರೂ ಮೊದಲು ಸತ್ತುಹೋಗಿ

ಎದ್ದಾಗ ಅದನ್ನು ತಾತ್ಕಾಲಿಕ ಮರಣ ಎನ್ನುತ್ತಿದ್ದೇವೆ. ತಾತ್ಕಾಲಿಕ ಮರಣ ಆತ್ಮ ಇಷ್ಟವನ್ನು ಅನುಸರಿಸಿ ನಡೆಯುತ್ತಿದೆ. ಒಂದು ಶರೀರದಲ್ಲಿ ಆತ್ಮ ಎಷ್ಟು ಸಮಯ ಅಡಗಿ ಕದಲಿಕೆಗಳು ಇಲ್ಲದಂತಿದೆಯೋ, ಅಷ್ಟು ಸಮಯ ಅವನು ತಾತ್ಕಾಲಿಕ ಮರಣವನ್ನು ಹೊಂದಿದಂತೆಯೇ ಆಗುತ್ತಿದೆ. ಉಳಿದ ಎರಡು ಮರಣಗಳಲ್ಲಿ ಆತ್ಮ, ಜೀವಾತ್ಮ ಹೊರಗೆ ಹೋದಾಗ ಈ ಮರಣದಲ್ಲಿ ಆತ್ಮವಾಗಲೀ, ಜೀವಾತ್ಮವಾಗಲೀ ಹೊರಗೆ ಹೋಗುವುದು ನಡೆಯುವುದಿಲ್ಲ. ಸ್ವಲ್ಪ ಕಾಲವು ಶರೀರದಲ್ಲಿ ಅಡಗಿಹೋದ ಆತ್ಮ ಪುನಃ ತನ್ನ ಚೈತನ್ಯವನ್ನು ಶರೀರವೆಲ್ಲವೂ ವ್ಯಾಪಿಸುವಂತೆ ಮಾಡಿ ಪುನಃ ಕದಲಿಕೆಗಳನ್ನು ಶುರುಮಾಡುವುದರಿಂದ ಅದೇ ಶರೀರದಲ್ಲಿ, ಅದೇ ಜೀವಿಯು ಜೀವನವನ್ನು ಸಾಗಿಸುತ್ತಿದ್ದಾನೆ. ಈ ರೀತಿ ತಾತ್ಕಾಲಿಕ ಮರಣವನ್ನು ಹೊಂದಿದವನು ಆ ತಾತ್ಕಾಲಿಕ ಮರಣದ ನಂತರ ಜೀವನವನ್ನು ಸಾಗಿಸುತ್ತಿದ್ದಾನೆ.

ಮರಣದ ನಂತರ ಕೂಡಲೇ ಒಂದು ಸೆಕೆಂಡು ಸಹ ತಡವಿಲ್ಲದೆ ಹೊಸ ಶರೀರದಲ್ಲಿ ಹೊಸ ಜೀವನ ಬರುತ್ತಿದೆ. ಅಕಾಲ ಮರಣವೊಂದರ ವಿಷಯಕ್ಕೆ ಬಂದರೇ, ಇದರಲ್ಲಿ ಸಹ ಜೀವಿಯು ಸ್ಥೂಲಶರೀರವನ್ನು ಮಾತ್ರವೇ ಬಿಟ್ಟು, ಸೂಕ್ಷ್ಮಶರೀರವನ್ನು ಬಿಡದೇ ಹಳೆಯ ಶರೀರದಲ್ಲಿಯೇ ಹಳೆ ಜೀವನವನ್ನೇ ಜೀವಿಯು ಕಳೆಯುತ್ತಿದ್ದಾನೆ. ಮೂರನೆಯದಾದ ತಾತ್ಕಾಲಿಕ ಮರಣವನ್ನು ಕುರಿತು ಆಲೋಚಿಸಿದರೆ ಹಳೆಯ ಶರೀರದಲ್ಲಿಯೇ ಅದೂ ಸ್ಥೂಲಶರೀರದಿಂದಲೇ ಹಳೆಯ ಜೀವನವೇ ಅನುಭವಕ್ಕೆ ಬರುತ್ತಿದೆ. ಮೂರು ಮರಣಗಳಲ್ಲಿಯೂ ಯಾವುದೋ ಒಂದು ವಿಧದಲ್ಲಿ ಹೊಸದೋ ಹಳೆಯದೋ ಜೀವನವೇ ಏರ್ಪಡುತ್ತಿದೆ. ಕಾಲ, ಅಕಾಲ, ತಾತ್ಕಾಲಿಕ ಎಂಬ ಮೂರು ಮರಣಗಳ ನಂತರ ಸಾಧಾರಣ ಜೀವನವೇ ಇದೆಯೆಂದು ತಿಳಿಯುತ್ತಿದೆ. ಆದರೇ ಸ್ವಲ್ಪ ಪ್ರತ್ಯೇಕತೆಯೊಂದಿಗೆ ಕೂಡಿಕೊಂಡ ಕೊನೆಯ ಮರಣದ ನಂತರ ಯಾವ ಜೀವನವೂ ಇರುವುದಿಲ್ಲವೆಂದು ತಿಳಿಯುತ್ತಿದೆ. ಕೊನೆಯ ಮರಣದ ನಂತರ ಜೀವನವೂ ಇರುವುದಿಲ್ಲ, ಅದರ ನಂತರ ಮರಣವೂ ಇರುವುದಿಲ್ಲ. ಆದ್ದರಿಂದ

ಆ ಮರಣವನ್ನು ಕೊನೆಯ ಮರಣ ಅಥವಾ ಅಂತಿಮ (ಕಟ್ಟಕಡೆಯ) ಮರಣ ಎಂದು ಅನ್ನುತ್ತಿದ್ದೇವೆ. ಆಖರೀ ಮರಣದ ನಂತರ ಇನ್ನು ಜೀವನವಿರುವುದಿಲ್ಲ. ಜೀವನಕ್ಕೆ ಬೇಕಾದ ಕರ್ಮ ಇರುವುದಿಲ್ಲ. ಕರ್ಮ ಏನೂ ಇಲ್ಲದಂತೆ ಹೋದಾಗಲೇ ಕೊನೆಯ ಮರಣ ಏರ್ಪಡುತ್ತಿದೆ.

**ಪ್ರಶ್ನೆ : "ಮರಣಾನಂತರ ಜೀವನ" ಎಂಬ ಒಂದು ಚಿಕ್ಕ ಪುಸ್ತಕವನ್ನು ನೋಡಿದ್ದೇನೆ. ಅದರಲ್ಲಿ ಇಂತಹ ಜೀವನವೇ ಇರುವುದಿಲ್ಲವೆಂದು ಬರೆದಿದ್ದಾರೆ. ಅದು ಕೇವಲ 12 ಪುಟಗಳ ಪುಸ್ತಕವೇ. ನೀವು ಹೇಳಿದ ಮರಣಗಳನ್ನು ಕುರಿತು ಅವರು ಹೇಳಲಿಲ್ಲವೇ?**

**ಉತ್ತರ :** ಮರಣ ಎಂದರೇ ಅದು ಯಾರ ಅನುಭವಕ್ಕೂ ಬರುವುದಿಲ್ಲವೆಂದು ನಾವು ಮೊದಲೇ ಹೇಳಿದ್ದೇವೆ. ಮರಣಿಸಿದವನಿಗೆ ತನ್ನ ಮರಣ ಹೇಗೆ ನಡೆದಿದೆಯೋ ಜ್ಞಾಪಕವಿರುವುದಿಲ್ಲ. ಹಾಗೆಯೇ ಜನ್ಮಿಸಿದವನಿಗೆ ತನ್ನ ಜನನ ಹೇಗಿದೆಯೋ ಸಹ ತಿಳಿದಿಲ್ಲ. ಆದ್ದರಿಂದ ಜನನ ಮರಣಗಳನ್ನು ಕುರಿತು ಯಾರೂ ಹೇಳಲಾರರು. ಜನನ ಸ್ಥಿತಿಯನ್ನು ಕುರಿತು ಮರಣ ಸ್ಥಿತಿಯನ್ನು ಕುರಿತು ಆ ದೇವರಿಗೆ ಹೊರತು ಇಲ್ಲಿಯವರೆಗು ಯಾರಿಗೂ ತಿಳಿಯದು. ಆದ್ದರಿಂದ ಮರಣದ ನಂತರ ಜೀವನವನ್ನು ಕುರಿತು ಅವರು ದೊಡ್ಡದಾಗಿ ಬರೆಯಲಾಗದೆ ಹೋಗಿದ್ದಾರೆ.

**ಪ್ರಶ್ನೆ :– ನೀವು ಈಗ ಮರಣಗಳನ್ನು ಕುರಿತು ಬರೆದಿದ್ದೀರಲ್ಲವೇ! ಮರಣವನ್ನು ಕುರಿತು ದೇವರಿಗೆ ಹೊರತು ಯಾರಿಗೂ ತಿಳಿಯದಿರುವಾಗ ನೀವು ಹೇಗೆ ಬರೆದಿದ್ದೀರ?**

**ಉತ್ತರ :–** ವಾಸ್ತವವಾಗಿ ಈ ಜ್ಞಾನವನ್ನು ಕುರಿತು ನನಗೆ ಏನೂ ತಿಳಿಯದೆಂದು ಮೊದಲಿನಿಂದ ಹೇಳುತ್ತಲೇ ಇದ್ದೇನೆ. ಇಲ್ಲಿಯವರೆಗು ಬರೆದ ಗ್ರಂಥಗಳಲ್ಲಿ ಯಾವುದೂ ನಾನು ಸ್ವತಃವಾಗಿ ನನಗೆ ತಿಳಿದು ಬರೆಯಲಿಲ್ಲ. ನಾನು ನನ್ನ ಯುಕ್ತವಯಸ್ಸಿನಿಂದಲೇ ನನ್ನ ಶರೀರದಲ್ಲಿ ನಾನು ಒಬ್ಬನೇ ಅಲ್ಲ ಇನ್ನೊಬ್ಬರಿದ್ದಾ

ರೆಂದು ಹೇಳುತ್ತಲೇ ಬರುತ್ತಿದ್ದೇನೆ. ಆತನೇ ಶರೀರಕ್ಕೆ ಅಧಿಪತಿಯೆಂದು, ಆತನ ಶರೀರದಲ್ಲಿ ನಾನು ಒಂದು ಕಡೆ ರವೆಯಷ್ಟು ಇದ್ದೇನೆಂದು, ಇದಕ್ಕೂ ಮೊದಲು ಎಷ್ಟೋ ಬಾರಿ ತಿಳಿಸಿದ್ದೇನೆ. ಆತನೇ ಶರೀರದಲ್ಲಿನ ದೇವರು. ಶರೀರದಲ್ಲಿನ ದೇವರಿಗೆ ತಿಳಿಯದಿರುವುದಂತು ಯಾವುದೂ ಇಲ್ಲ. ಎಲ್ಲ ರಹಸ್ಯಗಳು ಆತನಿಗೇ ತಿಳಿದಿವೆ. ಜನನ ಮರಣ ರಹಸ್ಯಗಳೆಲ್ಲವೂ ಆತನಿಗೇ ತಿಳಿದಿವೆ. ಆತನು ಹೇಗೆ ಆಡಿಸಿದರೇ ಜೀವಿಯು ಹಾಗೆಯೇ ಆಡಬೇಕಾಗಿದ್ದೇ! ಶರೀರದಲ್ಲಿ ಆತ್ಮವಾಗಿದ್ದು ಶರೀರವೆಲ್ಲಾ ಆವಹಿಸಿದವನು ಶರೀರದಲ್ಲಿ ಒಂದು ಕಡೆ ಇರುವ ಜೀವನಿಗೆ ಅಧಿಪತಿಯಾಗಿ, ಈಶ್ವರನಾಗಿ ಇದ್ದಾನೆ. ನನ್ನ ಶರೀರದಲ್ಲಿರುವ ಅಧಿಪತಿಯನ್ನು ನಾನು ಮೊದಲಿನಿಂದ ಗುರುತಿಸಿದ್ದೇನೆ. ಆತನೇ ನನ್ನನ್ನು ನಡೆಸುವವನೆಂದು, ಪ್ರತಿಯೊಂದಕ್ಕೂ ಆತನೇ ದರ್ಶಕನೆಂದು ಹೇಳುತ್ತಲೇ ಇದ್ದೇನೆ.

ಈಗ ನಾನು ಬರೆದಿದ್ದೇನೆಂದುಕೊಳ್ಳುವ ಮರಣ ರಹಸ್ಯಗಳೆಲ್ಲವೂ ಆತನು ಬರೆಯಿಸಿರುವವೇ. ಇಲ್ಲಿಯವರೆಗೂ ಜೀವಿಯು ದೇವರು ಎಂಬ ವಿಷಯವೇ ಎಲ್ಲರಿಗೂ ತಿಳಿದಿದೆ. ಆದರೇ ದೇವರು ನಾನು ಏನೂ ಮಾಡದವನೆಂದು, ಕೇವಲ ಸಾಕ್ಷಿಯಾಗಿ ಇರುವವನೆಂದು ದೈವ ಗ್ರಂಥಗಳಲ್ಲಿ ಹೇಳಿದ್ದಾನೆ. ಆದರೇ ಜೀವಿಯೂ ಸಹ ಏನೂ ಕೈಲಾಗದವನಾಗಿ ಇದ್ದಾನೆ. ದೇವರು ಮಾಡುವುದಿಲ್ಲ, ಜೀವಿಯು ಮಾಡಲಾರನು. ಹಾಗಿರುವಾಗ ಇಷ್ಟು ದೊಡ್ಡ ಪ್ರಪಂಚ ಹೇಗೆ ನಡೆಯುತ್ತಿದೆಯೆಂದು ಪ್ರಶ್ನಿಸಿಕೊಂಡು ನೋಡಿದರೇ ಜೀವಿಗೂ, ದೇವರಿಗೂ ಮಧ್ಯದಲ್ಲಿ ಮತ್ತೊಬ್ಬನಿದ್ದಾನೆಂದು ತಿಳಿಯುತ್ತದೆ. ಆತನೇ ಶರೀರದಲ್ಲಿ ದೇವರು. ಎಲ್ಲ ಶರೀರಗಳಲ್ಲಿ ದೇವರಾಗಿ ಒಂದೇ ಆತ್ಮ ಇದೆ. ಜೀವಿಯನ್ನು ಜೀವಾತ್ಮ ಎಂದು ಕರೆದಾಗ, ದೇವರನ್ನು ಪರಮಾತ್ಮ ಎಂದು ಕರೆದಾಗ, ಇವರ ಮಧ್ಯದಲ್ಲಿರುವವನನ್ನು ಆತ್ಮ ಎಂದು ಕರೆಯುತ್ತಿದ್ದೇವೆ. ಮಧ್ಯ ಇರುವವನನ್ನೇ ಶರೀರದಲ್ಲಿನ ದೇವರೇ ಎಂದು ನಾವು ಹೇಳುತ್ತಿದ್ದೇವೆ. ಇಲ್ಲಿಯವರೆಗು ಎಷ್ಟೋ ಆಧ್ಯಾತ್ಮಿಕನಿಪುಣ್ತರೆಲ್ಲರೂ ಜೀವಾತ್ಮ, ಪರಮಾತ್ಮರನ್ನು ಕುರಿತು ಹೇಳಿದ್ದಾರೆ ಹೊರತು, ಮಧ್ಯದಲ್ಲಿರುವ ಆತ್ಮವನ್ನು ಕುರುತು ಹೇಳಿರಲಿಲ್ಲ.

ಈ ವಿಷಯ ಮೂರು ದೈವ ಗ್ರಂಥಗಳಲ್ಲಿ ದೇವರು ಹೇಳಿರುವ ಆ ವಿಷಯವನ್ನು ಯಾರೂ ಬಿಚ್ಚಿ ಹೇಳಿಕೊಳ್ಳಲಿಲ್ಲ. ಆದ್ದರಿಂದ ಆತ್ಮ ವಿಷಯ ಇಲ್ಲಿಯವರೆಗು ಯಾರಿಗೂ ತಿಳಿಯದೆಂದೇ ಹೇಳಬಹುದು.

ನಾವು ದೈವಗ್ರಂಥದಲ್ಲಿ ಹೇಳಿದ ಆತ್ಮವನ್ನು ಗುರುತಿಸಿ ಹೇಳುವುದೇ ಅಲ್ಲದೇ ಆತನೇ ಎಲ್ಲವನ್ನೂ ಎಲ್ಲರಿಂದ ಮಾಡಿಸುತ್ತಿದ್ದಾನೆಂದು ಹೇಳುತ್ತಿದ್ದೇವೆ. ಭೂಮಿ ಮೇಲೆ ಎಲ್ಲಾದರಾಗಲೀ, ಯಾರಾದರಾಗಲೀ ಒಂದು ಒಳ್ಳೆಯ ಕೆಲಸ ಮಾಡಿದರೂ, ಇಲ್ಲವೆ ಒಂದು ಕೆಟ್ಟ ಕೆಲಸವನ್ನು ಮಾಡಿದರೂ ಮೇಲ್ನೋಟಕ್ಕೆ ಕಾಣಿಸುವ ಜೀವಿಯು ಮಾಡಲಿಲ್ಲ. ಕಾಣಿಸದಂತೆ ಅವನಲ್ಲಿ ಅಡಗಿರುವ ಆತ್ಮವೇ ಮಾಡಿಸುತ್ತಿದೆ. ಒಬ್ಬನನ್ನು ಅಪಘಾತಕ್ಕೆ ಗುರಿ ಮಾಡಿದರೂ, ಇಲ್ಲವೆ ಅಪಘಾತದಿಂದ ಕಾಪಾಡಿದರೂ ಅದು ಮಧ್ಯ ಆತ್ಮ ಮಾಡಿದ ಕೆಲಸವೇ, ದೇವರು ಏನೂ ಮಾಡುವುದಿಲ್ಲ. ಅದು ಆತನ ಧರ್ಮ. ಜೀವಿಯು ಏನೂ ಮಾಡುವುದಿಲ್ಲ. ಇದು ಜೀವಿಯ ಧರ್ಮ. ಇನ್ನೂ ಎಲ್ಲಾ ಮಾಡುವವನು ಆತ್ಮವೇ ಎಂದು ತಿಳಿಯಬೇಕು. ಇವೆಲ್ಲವೂ ಗಮನಿಸಿದ ನಂತರ ಆ ವಿಷಯ ಎಲ್ಲರಿಗೂ ತಿಳಿಯುವಹಾಗೆ ಈಗ ನನ್ನಿಂದ **"ಜನನ ಮರಣ ರಹಸ್ಯಗಳು"** ಬರೆಸಿರುವುದು ಸಹ ಮಧ್ಯದಲ್ಲಿರುವ ಆತ್ಮವೇ. ಮಧ್ಯ ಆತ್ಮಕ್ಕೆ ತಿಳಿಯದ ರಹಸ್ಯವಂತೂ ಯಾವುದೂ ಇಲ್ಲ. ಮಧ್ಯ ಆತ್ಮ ಪ್ರತಿ ಶರೀರದಲ್ಲಿದ್ದು ಎಲ್ಲಾ ತಾನೇ ಮಾಡಿಸುವುದರಿಂದ ಅತನಿಗೆ ಜನನವೂ ತಿಳಿದಿದೆ, ಮರಣವೂ ತಿಳಿದಿದೆ. **ಜಂತ್ರಗಾರನು ಗೊಂಬೆಗಳನ್ನು ಆಡಿಸಿದಂತೆ ಆತ್ಮ ಎಲ್ಲ ಶರೀರಗಳ ಗೊಂಬೆಗಳನ್ನು ಆಡಿಸುತ್ತಿದೆ.** ಪ್ರತಿ ಕೆಲಸವನ್ನು ಪ್ರತಿ ಮನುಷ್ಯನಿಂದ ಮಾಡಿಸುತ್ತಾ, ತಾನು ಮಾತ್ರ ಯಾರಿಗೂ ತಿಳಿಯದಂತೆ ಶರೀರದಲ್ಲಿ ಅಡಗಿದೆ. ಶರೀರದಲ್ಲಿ ಅಡಗಿರುವ ಆತ್ಮವೊಂದರ ಇರುವಿಕೆಯನ್ನು ಬಹಳ ಕಾಲದಿಂದ ಬಹಳ ಜನರು ತಿಳಿಯಲಾರದೇ, ದೇವರೇ ಎಲ್ಲ ಕೆಲಸಗಳು ಮಾಡುತ್ತಿದ್ದಾನೆಂದು ಅಂದು ಕೊಳ್ಳುವುದು ನಡೆಯುತ್ತಿದೆ. ಆದರೇ ದೇವರಿಗಂತು ಕೆಲವು ಧರ್ಮಗಳು ಇವೆ. ತನ್ನ ಧರ್ಮಗಳ ಪ್ರಕಾರ ದೇವರಿರುತ್ತಾನೆ. ದೇವರ ಪ್ರಾಥಮಿಕ ಧರ್ಮದ

ಪ್ರಕಾರ ಆತನಿಗೆ ರೂಪ, ನಾಮ, ಕ್ರಿಯೆಗಳು ಇಲ್ಲ. ಇದನ್ನನುಸರಿಸಿ ದೇವರಿಗೆ ರೂಪವೂ ಇಲ್ಲ, ಹೆಸರೂ ಇಲ್ಲ, ಕಾರ್ಯಗಳೂ ಇಲ್ಲ. ಆದ್ದರಿಂದ ಆತನು ಏನೂ ಮಾಡದವನೇ! ಜೀವಿಯು ಏನೂ ಕೈಲಾಗದವನೇ!! ಎಲ್ಲಾ ಮಾಡುವವನು ಆತ್ಮನೇ ಎಂದು ತಿಳಿಯಬೇಕು. ಎಲ್ಲ ಕೆಲಸಗಳನ್ನು ಮಾಡುವ ಆತ್ಮವನ್ನು ತಿಳಿಯುವುದೇ ಆಧ್ಯಾತ್ಮಿಕ. ನೀನು ಆತ್ಮನನ್ನು ತಿಳಿದುಕೊಂಡರೇ ಮನುಷ್ಯನಿಂದ ರಹಸ್ಯಗಳನ್ನು ಸಹ ಹೇಳಿಸುವುದು ಆತ್ಮವೇಯೆಂದು ತಿಳಿಯಬಲ್ಲೆವು. ಮನುಷ್ಯನಿಂದ ಹೇಳಿಸುವುದರಿಂದ ಆತ್ಮ ವಿಷಯ ತಿಳಿಯದ ಮನುಷ್ಯ, ತಾನೇ ಸ್ವತಹವಾಗಿ ರಹಸ್ಯಗಳನ್ನು ಹೇಳಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ನನಗೆ ಆತ್ಮಕ್ಕೆ ಸಂಬಂಧಿಸಿದ ಆಧ್ಯಾತ್ಮಿಕ ತಿಳಿದಿದೆ. ಆದ್ದರಿಂದ ನಾನಲ್ಲ ಆತ್ಮವೇ ಎಲ್ಲಾ ಹೇಳಿದೆಯೆಂದು ಹೇಳುತ್ತಿದ್ದೇನೆ.

**ಪ್ರಶ್ನೆ :– ನೀವು ಹೇಳುವುದೆಲ್ಲಾ ಕೇಳಿದ್ದೇವೆ. ಇತರರು ಹೇಳಿರುವುದು ಸಹ ಕೇಳಿದ್ದೇವೆ. ಮುಖ್ಯವಾಗಿ ಮುಸ್ಲೀಮ್‌ರು ಅವರ ದೈವ ಗ್ರಂಥವಾದ ಖುರಾನ್‌ನಲ್ಲಿ ಪ್ರಳಯದವರೆಗೂ ಸತ್ತುಹೋದವರೆಲ್ಲರನ್ನು ಒಂದೇ ಬಾರಿಗೆ ಏಬ್ಬಿಸುತ್ತಾನೆಂದೂ, ಒಟ್ಟಾಗಿ ಎಬ್ಬಿಸಿರುವ ಜನ ಸಮೂಹಕ್ಕೆ ಅವರವರ ತಪ್ಪು ಒಪ್ಪುಗಳ ಪ್ರಕಾರ ತೀರ್ಪನ್ನು ಕೊಡುತ್ತಾನೆಂದು ಹೇಳುತ್ತಿದ್ದಾರೆ. ಇದನ್ನನುಸರಿಸಿ ನೀವು ಇಲ್ಲಿಯವರೆಗೂ ಹೇಳಿರುವುದೆಲ್ಲಾ ಅಸತ್ಯವಾಗಿ ತಿಳಿಯುತ್ತದೆ. ಇದಕ್ಕೆ ನೀವೇನನ್ನುತ್ತೀರಾ?**

**ಉತ್ತರ :–** ಮುಸ್ಲೀಮ್‌ರು ಮೊದಲಿನಿಂದ ಈ ಮಾತನ್ನೇ ಹೇಳುತ್ತಿದ್ದಾರೆ. ಈ ವಿಷಯ ಅವರ ದೈವಗ್ರಂಥದಲ್ಲಿ ಇದೆಯೆಂದು ಹೇಳುತ್ತಿದ್ದಾರೆಂದು ನೀವೇ ಹೇಳಿದ್ದೀರಿ ಖುರಾನ್ ಗ್ರಂಥ ಮುಸ್ಲೀಮ್‌ರಿಗೊಬ್ಬರಿಗೇ ದೈವಗ್ರಂಥವಲ್ಲ, ಅದು ಸಮಸ್ತ ಮಾನವರಿಗೂ ದೈವ ಗ್ರಂಥವೇ. ಆದರೇ ದೈವಗ್ರಂಥದಲ್ಲಿ ದೇವರು ಹೇಳಿದ ವಿಷಯಗಳು ಎಲ್ಲರಿಗೂ ಸಮಾನವಾಗಿ ಅರ್ಥವಾಗಿವೆಯೆಂದು ಹೇಳಲಾರೆವು. ಪ್ರಳಯ ಕಾಲದ ಕೊನೆಯಲ್ಲಿ ದೇವರು ಎಲ್ಲರನ್ನೂ ಸಮೀಕರಿಸುವುದು ನಿಜವೇ, ಅವರ ಕರ್ಮಗಳ ಪ್ರಕಾರ ತೀರ್ಪು ಕೊಡುವುದೂ

ವಾಸ್ತವವೇ. ಆದರೇ ಒಂದೇ ಬಾರಿಗೆ ಆ ಕೆಲಸ ನಡೆಯುತ್ತಿದೆಯೆಂದು ದೇವರು ತನ್ನ ಗ್ರಂಥದಲ್ಲಿ ಎಲ್ಲಿಯೂ ಹೇಳಲಿಲ್ಲ. ವಾಸ್ತವವಾಗಿ ಹಾಗೆ ನಡೆಯುತ್ತಿಲ್ಲ. ಮನುಷ್ಯನಿಗೆ ವ್ಯಕ್ತಿಗತವಾಗಿ ನಡೆದ ಪ್ರಳಯದ ಕೊನೆಯಲ್ಲಿ ಆತನನ್ನು ದೇವರು ಪುನಃ ಸಮಾಧಿಯಿಂದ ಎಬ್ಬಿಸುವುದು ಸಹಜವೇ. ಆದರೇ ಅದು ಭೂಸಮಾಧಿಯಲ್ಲ. ಮೂರ್ಛೆಸ್ಥಿತಿಯನ್ನು ಸಮಾಧಿ ಎಂದು ಹೇಳುವುದು ಸಹಜವೇ. ಉದಾಹರಣೆಗೆ ರಾಮಕ್ರಿಷ್ಣಪರಮಹಂಸ ಮೂರ್ಛೆಸ್ಥಿತಿಯಲ್ಲಿ ಆಗಾಗ ಬಿದ್ದುಹೋಗುತ್ತಿದ್ದನು. ಆಗ ಆತನ ಶಿಷ್ಯರು ನಮ್ಮ ಗುರುಗಳು ಸಮಾಧಿ ಸ್ಥಿತಿಯೊಳಗೆ ಹೋಗಿದ್ದಾರೆಂದಾಗಲೀ, ಸಮಾಧಿಯೊಳಗೆ ಹೋಗಿದ್ದಾನೆಂದಾಗಲೀ ಹೇಳುತ್ತಿದ್ದರು. ಇಲ್ಲಿ ಯಾವುದನ್ನು ಸಮಾಧಿ ಎನ್ನುತ್ತಿದ್ದೇವೋ, ಮನುಷ್ಯ ಹುಟ್ಟುವಿಕೆಯಲ್ಲಿ ಅದೇ ಸ್ಥಿತಿಯಿಂದ ಏಳುತ್ತಿದ್ದಾನೆ. ಆದ್ದರಿಂದ ಸಮಾಧಿಯಿಂದ ಮನುಷ್ಯನನ್ನು ಎಬ್ಬಿಸಿದಾಗ ಆತನ ಕರ್ಮ ಆತನ ಕರ್ಮಪಟ್ಟಿಯ ಪ್ರಕಾರ ಆತನಿಗೆ ತೀರ್ಪು ಕೊಡಲಾಗುತ್ತದೆ ಎಂದು ಇದೆ. ಎಂದರೇ ಆತನ ಕರ್ಮದ ಪ್ರಕಾರ ನಂತರ ಜನ್ಮ ಹೇಗೆ ನಡೆಯಬೇಕೋ, ಅದು ಸುಖಮಯವೋ ಅಥವಾ ಕಷ್ಟಮಯವೋ ಅದನ್ನು ದೇವರೇ ನಿರ್ಣಯಿಸುತ್ತಾನೆ. ಇದೇ ವಾಸ್ತವವಾಗಿ ನಡೆಯುತ್ತಿರುವ ವಿಧಾನ, ಇದೇ ವಿಧಾನವನ್ನು ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ಅಷ್ಟೇ ಹೊರತು ಒಟ್ಟಾಗಿ ಸೃಷ್ಠಿಮೊದಲಿನಿಂದ ಪ್ರಳಯದ ವರೆಗೂ ಹುಟ್ಟಿದವರೆಲ್ಲರನ್ನೂ ಒಟ್ಟಿಗೆ ಎಬ್ಬಿಸುತ್ತೇನೆಂದು ಹೇಳುವುದು ಗ್ರಂಥದಲ್ಲಿ ಎಲ್ಲಿಯೂ ಇಲ್ಲ. ದೇವರು ಮಾಡುತ್ತಿರುವ ತನ್ನ ವಿಧಾನವನ್ನು ಖುರಾನ್ ಗ್ರಂಥದಲ್ಲಿ ಬಹಳ ವಿವರವಾಗಿ ಹೇಳಿದ್ದಾನೆ. ಆದರೇ ಅದನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಬಹಳ ಜನರು ತಪ್ಪಾಗಿ ಅರ್ಥೈಸಿಕೊಳ್ಳುವುದು ನಡೆಯುತ್ತಿದೆ. ಖುರಾನ್ ಗ್ರಂಥದಲ್ಲಿ ದೇವರು ಹೇಳಿರುವುದು ಒಂದಾದರೇ ಮನುಷ್ಯ ಅರ್ಥ ಮಾಡಿಕೊಂಡಿರುವುದು ಮತ್ತೊಂದಾಗಿದೆ. ಮನುಷ್ಯನೊಂದರ ಸಾವು ಹುಟ್ಟುವಿಕೆ ವಿಷಯದಲ್ಲಿ ಬಹಳ ಜನರು ದೇವರು ಹೇಳಿದ್ದನ್ನು ಅರ್ಥ ಮಾಡಿಕೊಂಡಿಲ್ಲವೆಂದೇ ಹೇಳಬಹುದು.

**ಪ್ರಶ್ನೆ :– ಆದರೇ ಖುರಾನ್‌ನಲ್ಲಿ ಹೇಳಿರುವುದು ಅಸತ್ಯವೆನ್ನುತ್ತೀರಾ?**

**ಉತ್ತರ :–** ನಾನು ಎಂದಿಗೂ ಆ ಮಾತನ್ನು ಹೇಳಲಿಲ್ಲ. ಅದು ದೈವ ಗ್ರಂಥ. ಅದರಲ್ಲಿನ ದೇವರ ಮಾತು ಯಾವುದೂ ವ್ಯರ್ಥವಾಗುವುದಿಲ್ಲ. ಆದರೇ ಖುರಾನ್‌ನಲ್ಲಿ ಹೀಗೆ ಇದೆಯೆಂದು ನೀವು ಹೇಳುವ ಮಾತು ಅಸತ್ಯ. ಒಂದೇಬಾರಿಗೆ ಮನುಷ್ಯರೆಲ್ಲರನ್ನೂ ಎಬ್ಬಿಸುತ್ತೇನೆಂದು ಖುರಾನ್‌ನಲ್ಲಿ ಹೇಳಲಿಲ್ಲ. ಮನುಷ್ಯ ಪುನರ್ಜನ್ಮವನ್ನು ಕುರಿತು ಎಷ್ಟೋ ಆಯತ್‌ಗಳಲ್ಲಿ ಬರೆದಿಡಲಾಗಿವೆ. ಆದರೂ ಕೆಲವರು ಮುಸ್ಲೀಮ್‌ರು ಪುನರ್ಜನ್ಮಗಳು ಇಲ್ಲ ಎನ್ನುತ್ತಿದ್ದಾರೆ. ಇದನ್ನನುಸರಿಸಿ ಅವರ ಹಿರಿಯರು ಹೇಳಿರುವುದನ್ನೇ ಅವರು ಬಲವಾಗಿ ನಂಬುತ್ತಿದ್ದಾರೆ ಆದರೇ, ಗ್ರಂಥದಲ್ಲಿ ಹೇಳಿದ್ದನ್ನು ಅವರು ನಂಬಲಿಲ್ಲವೆಂದು ತಿಳಿಯುತ್ತಿದೆ.

**ಪ್ರಶ್ನೆ :– ಮರಣದ ನಂತರ ಜೀವನವನ್ನು ಕರಿತು ಹೇಳುತ್ತಾ, ದೇವರು ಅವನ ಕರ್ಮದ ಪ್ರಕಾರ ವಿಧಿಸುವ ಸ್ವರ್ಗನರಕಗಳೇ ನಂತರ ಅವನ ಜೀವನವೆಂದಿದ್ದೀರ. ಅದು ವಾಸ್ತವವೇನಾ?**

**ಉತ್ತರ :–** ಮರಣದ ನಂತರ ನಿರ್ಣಯಿಸಲಾಗುವ ಸ್ವರ್ಗನರಕಗಳು ಪ್ರತ್ಯೇಕ ಲೋಕಗಳೆಂದು ಕೆಲವರು ಹೇಳುತ್ತಿದ್ದಾರೆ. ಆದರೇ ಸ್ವರ್ಗನರಕಗಳಲ್ಲಿ ಬೇರೆ ಬೇರೆ ಅನುಭವಗಳಿರುವುದರಿಂದ, ಅವುಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸ್ವರ್ಗ ನರಕಗಳು ಪ್ರತ್ಯೇಕ ಲೋಕಗಳೆಂದಿದ್ದಾರೆ. ವಾಸ್ತವಕ್ಕೆ ಸ್ವರ್ಗನರಕಗಳು ಪ್ರತ್ಯೇಕ ಲೋಕಗಳಲ್ಲ. ಮನುಷ್ಯ ಅನುಭವಿಸುವ ಸುಖದುಃಖ ಅನುಭವಗಳನ್ನು ಸ್ವರ್ಗನರಕಗಳೆಂದಿದ್ದಾರೆ. ಲೋಕ ಎಂದರೇ ಅದನ್ನು ಪ್ರತ್ಯೇಕ ದೇಶವೆಂದೋ, ಪ್ರತ್ಯೇಕ ಪ್ರಪಂಚವೆಂದೋ ಅರ್ಥ ಮಾಡಿಕೊಳ್ಳಬಾರದು. ಲೋಕ ಎಂದರೇ ಶರೀರದಲ್ಲಿನ ಒಂದು ವಿಧಾನ ಎಂದು ಅರ್ಥ. ಭಗವದ್ಗೀತೆಯಲ್ಲಿ **"ದ್ವಾವಿಮೌ ಪುರುಷೌ ಲೋಕೇ"** ಎಂದು ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಲಾಗಿದೆ. ಅಲ್ಲಿ ಲೋಕವೆಂದರೇ ಶರೀರದಲ್ಲಿನ ವಿಧಾನದಲ್ಲಿ ಅಥವಾ ಶರೀರದಲ್ಲಿ ಎರಡು ವಿಧಗಳ ಪುರುಷರು ಇದ್ದಾರೆಂದು ಅರ್ಥ. ಇದರ ಪ್ರಕಾರ ಶರೀರ ವಿಧಾನದಲ್ಲಿ

ಸುಖವನ್ನು ಸ್ವರ್ಗಲೋಕವೆಂದೂ, ಹಾಗೆಯೇ ಶರೀರ ವಿಧಾನದಲ್ಲಿ ಕಷ್ಟವನ್ನು ಅನುಭವಿಸುವುದನ್ನು ನರಕ ಲೋಕವೆಂದೂ ಹೇಳಬಹುದು. ದೇವರು ಶರೀರದಲ್ಲಿ ಜೀವಿಯು ಅನುಭವಿಸುವ ವಿಧಾನವನ್ನೇ ಹೇಳಿದ್ದಾನೆ. ಆದ್ದರಿಂದ ಲೋಕ ಗಳೆನ್ನುವವು ಶರೀರದ ಹೊರಗೆ ಇಲ್ಲ ಶರೀರದ ಒಳಗೇ ಇವೆಯೆಂದು ಹೇಳಬಹುದು. ಮನುಷ್ಯನ ಶರೀರದಲ್ಲಿ ಗುಣಗಳೊಂದಿಗೆ ಮಾಡುವ ಆಲೋಚನೆಗಳ ವಿಧಾನವನ್ನು ಸಹ ಲೋಕ ಎಂದಿದ್ದಾರೆ. ಮೂರು ವಿಧಗಳ ಗುಣಗಳ ಆಲೋಚನೆಗಳನ್ನು ಮೂರು ಲೋಕಗಳಾಗಿ ಹೇಳಿದ್ದಾರೆ. ಮನುಷ್ಯನ ಗುಣಗಳನ್ನು ಅವುಗಳ ಆಲೋಚನೆಗಳನ್ನು ಜಯಿಸದಂತಿದ್ದಾನೆಂದು ಇಲ್ಲವೆ ದಾಟಲಾರದೇ ಇದ್ದಾನೆಂದು ಹೇಳುತ್ತಾ, ಒಬ್ಬ ತತ್ತ್ವವೇತ್ತರಾದವರು **"ಮೂರು ಕಾಲುವೆಗಳನ್ನು ದಾಟಲಾರಣ್ಣ ಇಂಥ ಮೂಢಜನರು"** ಎಂದು ತನ್ನ ಬೊಧನೆಯಲ್ಲಿ ಹೇಳಿದ್ದಾನೆ. ಇಲ್ಲಿ ಮೂರು ಕಾಲುವೆಗಳೆಂದು ಮೂರು ವಿಧಾನಗಳಾಗಿರುವ ಮೂರು ಗುಣಗಳನ್ನೇ ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಸಹ 'ಮುಲ್ಲೋಕಗಳು' ಎಂಬ ಮಾತು ಬಹಳ ಸಲ ಕೇಳಿಸಿದರೂ, ಅಲ್ಲಿ ಪ್ರತ್ಯೇಕ ಪ್ರಪಂಚಗಳಾಗಿ ಅವುಗಳನ್ನು ಅರ್ಥಮಾಡಿಕೊಳ್ಳಬಾರದು. ಅವುಗಳನ್ನು ಶರೀರಾಂತರ್ಗತ ವಿಧಾನಗಳಾಗಿ ಅರ್ಥ ಮಾಡಿಕೊಂಡಾಗಲೇ ಸರಿಯಾದ ಜ್ಞಾನ ಅರ್ಥವಾಗುತ್ತದೆ. ಪ್ರತ್ಯೇಕ ಪ್ರಪಂಚಗಳಾಗಿ ಅರ್ಥ ಮಾಡಿಕೊಂಡರೇ, ಜ್ಞಾನಮಾರ್ಗದಲ್ಲಿ ಮುಂದಕ್ಕೆ ಹೋಗುವುದಕ್ಕೆ ಅವಕಾಶವಿರುವುದಿಲ್ಲ. ಜ್ಞಾನ ಏನೂ ಅರ್ಥವಾಗುವುದಿಲ್ಲ. ಆದ್ದರಿಂದ ಸ್ವರ್ಗ, ನರಕ ಲೋಕಗಳು ಎನ್ನುವವು ಶರೀರದಲ್ಲಿ ಅನುಭವಿಸುವ ಬೇರೆಬೇರೆ ವಿಧಾನಗಳೆಂದು ತಿಳಿಯಬೇಕು. ಮನುಷ್ಯನ ಅನುಭವಕ್ಕೆ ಬರುವ ಕಷ್ಟ, ಸುಖ ವಿಧಾನಗಳನ್ನೇ ಸ್ವರ್ಗ, ನರಕಗಳೆಂದು ಅನ್ನುತ್ತಿದ್ದೇವೆ.

**ಪ್ರಶ್ನೆ :– ಸ್ವರ್ಗದಲ್ಲಿ ಗಂಡಸರಿಗೆ ಸೇವೆಗಳು ಮಾಡುವುದಕ್ಕೆ ಸುಂದರವಾದ ಸ್ತ್ರೀಯರು ಕೆಲವರಿರುತ್ತಾರೆಂದೂ, ಹಾಗೆಯೇ ಹೆಂಗಸರು ಸ್ವರ್ಗಕ್ಕೆ ಹೋದರೇ ಅಲ್ಲಿ ಅವರಿಗೆ ಸೇವೆ ಮಾಡುವುದಕ್ಕೆ ಸುಂದರವಾದ ಹುಡುಗರು ಇರುತ್ತಾರೆಂದು ಖುರಾನ್ ಗ್ರಂಥದಲ್ಲಿ ಹೇಳಲಾಗಿದೆ ಇದನ್ನು ನೀವು ಅಲ್ಲವೆನ್ನುತ್ತೀರಾ?**

**ಉತ್ತರ :–** ಅಲ್ಲವೆಂದು ನಾನು ಹೇಳಲಿಲ್ಲ. ಗಂಡಸರು ಸುಖಗಳು ಅನುಭವಿಸಿದರೂ, ಹೆಂಗಸರು ಸುಖಗಳನ್ನು ಅನುಭವಿಸಿದರೂ ಆ ಸುಖಗಳನ್ನು ಶರೀರದಲ್ಲೇ ಅನುಭವಿಸುತ್ತಿದ್ದಾರೆಂದು ಹೇಳುತ್ತಿದ್ದೇವೆ. ಮನುಷ್ಯರು ಮಾಡಿಕೊಂಡ ಪುಣ್ಯವನ್ನನುಸರಿಸಿ ಅವರಿಗೆ ಸೇವೆಗಳು ಮಾಡುವವರು ಎಷ್ಟು ಮಂದಿಯಾದರೂ ಇರಬಹುದು. ಇಲ್ಲವೆಂದು ಹೇಳಲಾರೆವಲ್ಲವೇ! ಸುಖಗಳು ಎಷ್ಟು ವಿಧಗಳಾದರೂ ಅನುಭವಿಸಬಹುದು. ಅದೆಲ್ಲವೂ ಆತನು ಮಾಡಿಕೊಂಡ ಪುಣ್ಯವನ್ನನುಸರಿಸಿ ಇರುತ್ತದೆ. ಯಾರು ಹೇಗೆ ಸುಖವನ್ನು ಅನುಭವಿಸಿದರೂ ಅದು ಸ್ವರ್ಗ ಸಂಬಂಧ ವಿಧಾನವೆಂದೂ, ಅದು ಶರೀರದಲ್ಲೇ ಅನುಭವವನ್ನು ಹೊಂದುತ್ತಿದ್ದಾನೆಂದು ತಿಳಿಯುತ್ತದೆ. ಮನುಷ್ಯರೆಲ್ಲರಿಗೂ ಒಂದೇ ವಿಧವಾದ ಸುಖ ಇರುತ್ತದೆಂದು ಕೊಳ್ಳುವುದು ತಪ್ಪು. ಯಾರು ಮಾಡಿಕೊಂಡ ಪುಣ್ಯಫಲವನ್ನನುಸರಿಸಿ ಅವರಿಗೆ ಸುಖ ಇರುತ್ತದೆಂದು ತಿಳಿಯಬೇಕು.

**ಪ್ರಶ್ನೆ :– ಮರಣದ ನಂತರ ಜೀವನ ಪರಲೋಕಕ್ಕೆ ಸಂಬಂಧಿಸಿರುವುದಾ? ಇಹ ಲೋಕಕ್ಕೆ ಸಂಬಂಧಿಸಿರುವುದಾ?**

**ಉತ್ತರ :–** ಮರಣದ ನಂತರ ಜೀವನ ಇಹ ಲೋಕಕ್ಕೆ ಸಂಬಂಧಿಸಿರುವುದೇ. ಎಂದರೆ ಇಲ್ಲಿ ಈ ಜೀವನಕ್ಕೆ ಸಂಬಂಧಿಸಿರುವುದೇ. ಪರಲೋಕಕ್ಕೆ ಸಂಬಂಧಿಸಿರುವುದಲ್ಲ. ಪರಲೋಕ ಎಂದರೇ ಶರೀರದೊಳಗೆ ಅನುಭವಿಸುವುದಲ್ಲ. ಶರೀರದ ಹೊರಗೆ ಎಲ್ಲಾ ವ್ಯಾಪಿಸಿರವುದನ್ನು ಪರಲೋಕ ಎನ್ನುತ್ತೇವೆ. ಇಹಲೋಕವಲ್ಲದ್ದು ಪರಲೋಕ. ಈ ಶರೀರದಲ್ಲಿನ ಅನುಭವ ವಿಧಾನವಲ್ಲದೆ, ಶರೀರದ ಹೊರಗಿರುವುದನ್ನು ಅನುಭವಿಸುವ ವಿಧಾನವನ್ನು ಪರಲೋಕಪ್ರಾಪ್ತಿ ಎನ್ನುತ್ತಾರೆ. **ಶರೀರದ ಒಳಗೆ ಇಹಲೋಕ, ಶರೀರದ ಹೊರಗೆ ಪರಲೋಕವೆಂದು ಅರ್ಥ ಮಾಡಿಕೊಂಡಾಗಲೇ ದೈವಜ್ಞಾನ ಸರಿಯಾದ ಮಾರ್ಗದಲ್ಲಿ ಅರ್ಥವಾಗುತ್ತದೆ.** ಈದಿನ ಮನುಷ್ಯರೆಲ್ಲರಿಗೂ ಲೋಕಗಳು ಎರಡು ವಿಧಗಳೆಂದೂ, ಒಂದು ವಿಧ ಶರೀರದ ಒಳಗಿದೆಯೆಂದೂ, ಎರಡನೆಯ ವಿಧ ಶರೀರದ ಹೊರಗೆ ಇದೆಯೆಂದೂ ತಿಳಿಯದು. ಶರೀರದ ಒಳಗಿರುವ ಲೋಕ ವಿಧಾನಗಳು

ಗುಣಗಳನ್ನನುಸರಿಸಿ ಅನುಭವಗಳನ್ನನುಸರಿಸಿ ಇರುವುದರಿಂದ ಶರೀರದಲ್ಲಿರುವುದನ್ನು ಇಹಲೊಕ ಎನ್ನುತ್ತಿದ್ದೇವೆ. ಇಹಲೋಕ ಗುಣಗಳಿಂದ ಮೂರು ವಿಧಗಳಾಗಿದ್ದರೂ, ಅನುಭವಗಳು ಮಾತ್ರ ಸ್ವರ್ಗ, ನರಕ ಎಂಬ ಎರಡು ವಿಧಗಳಾಗಿಯೇ ಇವೆ. ಇನ್ನೂ ಶರೀರದ ಹೊರಗೆ ಇರುವ ವಿಧಾನವನ್ನು ಪರಲೋಕ ಎನ್ನುತ್ತಿದ್ದೇವೆ. ಪರಲೋಕ ಒಂದೇ ವಿಧವಾಗಿದ್ದೂ ಸೀಳಿಕೆಗಳು ಇಲ್ಲದಿರುವುದಾಗಿ ಇದೆ. ಆದ್ದರಿಂದ ಅಲ್ಲಿ ಮನುಷ್ಯ ಹೊಂದುವ ಅನುಭವವೂ ಸಹ ಒಂದೇ ಇದೆ. ಅದು ಇಹಲೋಕದಲ್ಲಿನ ಸ್ವರ್ಗ, ನರಕಗಳಂತದ್ದಲ್ಲದೆ ಪ್ರತ್ಯೇಕವಾಗಿರುವುದಾಗಿ ಇದೆ. ಪರಲೋಕದಲ್ಲಿ ಸುಖ ಇರುವುದಿಲ್ಲ, ದುಃಖ ಇರುವುದಿಲ್ಲ. ಶರೀರದಲ್ಲಿ ಯಾವಾಗ ಎಲ್ಲಿ ಅನುಭವಿಸದಂತಿರುವುದು, ಸುಖ ದುಃಖಗಳಲ್ಲದಿರುವುದು, ಹೀಗಿದೆಯೆಂದು ಇತರರಿಗೆ ಹೇಳಲಾರದ ಅನುಭವವಿರುತ್ತದೆ. ಅದೇ ಪರಲೋಕದಲ್ಲಿರುವ ದೈವಾನುಭೂತಿ. ಎಂದಿಗೂ ಅನುಭವಿಸದ ಅನುಭೂತಿಯನ್ನು ಪರಲೋಕದಲ್ಲಿ ಅನುಭವಿಸುವುದು ನಡೆಯುತ್ತಿದೆ. ಅದು ಎಲ್ಲದಕ್ಕಿಂತ ದೊಡ್ಡ ಅನುಭೂತಿ ಆಗಿರುವುದರಿಂದ ಅದನ್ನೇ ಜ್ಞಾನಿಗಳಾದವರು **"ಬ್ರಹ್ಮಾನುಭೂತಿ"** ಎನ್ನುತ್ತಿದ್ದಾರೆ. ಅದು ಸ್ವರ್ಗ ನರಕಗಳಿಗಿಂತ ಎಷ್ಟೋ ದೊಡ್ಡದು. ಆದ್ದರಿಂದ ಪ್ರತಿ ಮನುಷ್ಯ ಸ್ವರ್ಗನರಕಗಳನ್ನು ನಿರೀಕ್ಷಿಸದೆ ಪರಲೋಕಪ್ರಾಪ್ತಿಯನ್ನು ಕೋರಬೇಕೆಂದು ತಿಳಿಸುತ್ತಿದ್ದೇವೆ. ಮರಣಾನಂತರ ಜೀವನ ಇಹಲೋಕ ಸಂಬಂಧವೆಂದು ತಿಳಿಸುತ್ತಿದ್ದೇವೆ. ಮರಣ ನಂತರ ಜೀವನ ಇಹಲೋಕ ಸಂಬಂಧವಾಗದಂತೆ ಪರಲೋಕ ಸಂಬಂಧವಾಗಿ ಇರಬೇಕೆಂದು ಪ್ರತಿ ಮನುಷ್ಯ ಕೋರಿಕೊಳ್ಳಬೇಕು.



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಮಂದಿ ಅಲ್ಲ ಎಂದರೂ ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ"

ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

Cell:09705864675, 09440556968, 09611133635

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

